ಬಾಲಸಾಹಿತ್ಯ ಮಂಡಲ,
ಲಿಮಿಟೆಡ್,
ಕೊಡಿಯಾಲಬೈಲು, ಮಂಗಳೂರು.

---

ಹರಾಮಶೇಗಾರಿ

# ಚಂಡಕೌಶಿಕ

ಎಮ್. ಎಸ್. ಕಾಮತ್,
ಮಂಗಳೂರು.





1956

[PRICE 6 Annas.]    [ಕ್ರಯ: ೬ ಆಣೆ.

Approved by the Text Book Committee, Madras
Recognised by the Director of Puplic Instruction, Mad

PUBLISHED BY

THE BALA SAHITYA MANDALA, LTD.

Kodialbail, Mangalore.





SIXTH EDITION

1947

ಬಾಲಸಾಹಿತ್ಯ ಮಂಡಲ,
ಲಿಮಿಟೆಡ್,
ಕೊಡಿಯಾಲಬೈಲು, ಮಂಗಳೂರು.



# ಚಂಡಕೌಶಿಕ

ಎಮ್ ಎನ್. ಕಾಮತ್,
ಮಂಗಳೂರು.





1956

PRICE 6 Annas.] [ಕ್ರಯ: ೬ ಆಣೆ.

# ಪ್ರಸ್ತಾವನೆ

'ಚಂಡಕೌಶಿಕ'ವೆಂದರೆ ವಿಶ್ವಾಮಿತ್ರನು ಕೆರಳಿದ್ದುದರಿಂದ ಕೈಕೊಂಡ ಕಾರ್ಯಗಳ ವೃತ್ತಾಂತವು. ಮೊದಲೊಮ್ಮೆ, ಇಂದ್ರನ ಸಭೆಯಲ್ಲಿ, ಪ್ರಪಂಚದಲ್ಲೆಲ್ಲ ಸತ್ಯವಂತರಲ್ಲಿ ಶ್ರೇಷ್ಠನಾದವನು ಅವನೆಂದು ತರ್ಕ ನಡೆದಿರಲು—ವಸಿಷ್ಠನು ತನ್ನ ಶಿಷ್ಯನಾದ ಹರಿಶ್ಚಂದ್ರ ಮಹಾರಾಯನೇ ಅವನೆಂದು ಅಭಿಮಾನಪುರಸ್ಸರವಾಗಿ ನುಡಿದನು. ಅಲ್ಲಿ ಆಗಲೆ ಮಂಡಿಸಿದ್ದ ವಿಶ್ವಾಮಿತ್ರನಿಗೆ ವಸಿಷ್ಠನ ಈ ಮಾತಿನಲ್ಲಿ ದುರಭಿಮಾನವುಂಟಾಯಿತು. ಒಡನೆಯೆ ಅವನು, ಹರಿಶ್ಚಂದ್ರನನ್ನು ಸತ್ಯಭ್ರಷ್ಟನನ್ನಾಗಿ ಮಾಡುವೆನೆಂದು ಕಠಿನವಾದ ಶಪಥವನ್ನು ಹಾಕಿಕೊಂಡನು. ವಸಿಷ್ಠನೂ ಹರಿಶ್ಚಂದ್ರನ ಸತ್ಯಕ್ಕೆ ಚ್ಯುತಿಯುಂಟಾಗಲಾರದೆಂದು ಪ್ರಮಾಣವಾಗಿ ನುಡಿದನು. ಇವರಿಬ್ಬರ ಬಿರುನುಡಿಗಳ ದೆಸೆಯಿಂದ, ಸೂರ್ಯವಂಶದಲ್ಲಿ ಪ್ರಸಿದ್ಧನಾದ ಹರಿಶ್ಚಂದ್ರನು ತನ್ನ ಹೆಂಡತಿ ಮಕ್ಕಳೊಡನೆ ಕಠಿನವಾದ ದುಃಖವನ್ನೂ ಕಷ್ಟಗಳನ್ನೂ ಸಹಿಸಬೇಕಾಯಿತು. ಆದರೆ, ಅವನ ದೃಢತೆಯಿಂದಲೂ ಭರವಸೆಯಿಂದಲೂ, ವಿಶ್ವಾಮಿತ್ರನ ಪ್ರತಿಜ್ಞೆಯು ವ್ಯರ್ಥವಾಯಿತು. ಹರಿಶ್ಚಂದ್ರನು ಎಲ್ಲವನ್ನೂ ತ್ಯಜಿಸಿ, ಸತ್ಯವೊಂದನ್ನು ಬಿಗಿಹಿಡಿದಿದ್ದುದರಿಂದ ಕೊನೆಗೆ ವಿಶ್ವಾಮಿತ್ರನ ದೆಸೆಯಿಂದಲೆ ಅವನಿಗೆ ವಿಶೇಷವಾದ ಸೌಖ್ಯವೂ ಭಾಗ್ಯವೂ ಕೀರ್ತಿಯೂ ಉಂಟಾದುವು.

'ಸತ್ಯಮೇವ ಜಯತೇ'—ಎಂಬುದಕ್ಕೆ ಇದುವೆ ಉಜ್ವಲವಾದ ನಿದರ್ಶನವು.

ಇತಿಹಾಸದಲ್ಲಿ ತೋರುವ ಈ ಪುಣ್ಯಚರಿತ್ರೆಯನ್ನು ಕಾವ್ಯರೂಪವಾಗಿಯೂ ಪದ್ಯರೂಪವಾಗಿಯೂ ಅನೇಕ ಗ್ರಂಥಕರ್ತರು ಬರೆದಿರುವರು. ವಿದ್ಯಾರ್ಥಿಯರು ಈ ಕಥೆಯನ್ನು ಶ್ರೀಕೃಷ್ಣರಾಜವಾಣೀವಿಲಾಸ ಭಾರತದಲ್ಲೂ, ಹರಿಶ್ಚಂದ್ರಕಾವ್ಯದಲ್ಲೂ, ಬಸಪ್ಪಶಾಸ್ತ್ರಿಗಳು ರಚಿಸಿರುವ ಚಂಡಕೌಶಿಕ ನಾಟಕದಲ್ಲೂ ಓದಬಹುದಾಗಿದೆ; ಮಾತ್ರವಲ್ಲ, ಇವೇ

ಗ್ರಂಥ ಭಾಗಗಳನ್ನು ಆಗಾಗ ಪರೀಕ್ಷೆಗಳಿಗಾಗಿ ಓದಲು ಗೊತ್ತುಮಾಡು ವುದಿದೆ.

ಸಂಸ್ಕೃತದಲ್ಲಿ ನಾಟಕರೂಪವಾಗಿ ಈ ಚರಿತ್ರೆಯನ್ನು ಬರೆದವನು ಕ್ಷೇಮೀಶ್ವರ ಕವಿ. ಆ ನಾಟಕದಿಂದ ಕಥೆಯನ್ನು ಸಂಗ್ರಹಿಸಿ, ಈಗ ಈ ಚಿಕ್ಕ ಪುಸ್ತಕ ರೂಪವಾಗಿ ಪ್ರಕಟಗೊಳಿಸಿರುವೆವು. ಆರ ಸಲುವಾಗಿ ಇದನ್ನು ಬರೆದೆವೊ, ಅವರಿಗೆ ಇದರಿಂದ ಯಥಾರ್ಥವಾದ ಪ್ರಯೋಜನವು ದೊರೆಯಲೆಂಬುವ ನಮ್ಮ ಕೋರಿಕೆಯನ್ನು ಆನಂದದಿಂದ ವಿಜ್ಞಾಪಿಸಿಕೊಳ್ಳು ತ್ತೇವೆ. ಈ ಪುಸ್ತಕವನ್ನು ಮದ್ರಾಸು ಟೆಕ್ಸ್ಟ ಬುಕ್ ಕಮಿಟಿಯವರು ಅಂಗೀಕರಿಸಿರುವರಲ್ಲದೆ, ಮದ್ರಾಸ್ ಎಸ್. ಎಸ್. ಎಲ್. ಸಿ. ಪರೀಕ್ಷೆಗೂ ಉಪಾಧ್ಯಾಯರ ತರಬೇತಿಯ ಪರೀಕ್ಷೆಗೂ, ದ. ಕ. ಜಿಲ್ಲಾ ಶಿಕ್ಷಣದ ಕೌನ್ಸಿಲ್‌ನವರು ಪಾಠಶಾಲೆಗಳಿಗೂ ಗೊತ್ತುಮಾಡಿರುವುದಕ್ಕಾಗಿ ಕೃತಜ್ಞರಾಗಿರುವೆವು.

20—9—'30. **M. N. Kamath**



# ಚಂಡಕೌಶಿಕ

## ಮೊದಲನೆ ಅಂಕ

ಸಮಯವು ಅದಾಗಿರದೆ ಚಂದ್ರನಿಗೆ ಗ್ರಹಣ ಹಿಡಿದಿತು! ಭೂಮಿಯು ನಡುಗಲು ತೊಡಗಿತು; ಉಲ್ಕೆಗಳೂ ಸುರಿದು ಬಿದ್ದುವು; ಆಕಾಶದಲ್ಲಿ ಸೂರ್ಯನನ್ನು ಸುತ್ತಿದ್ದ ಅದೊಂದು ಮಂಡಲವು ತೋರಿಬಂದಿತು. ಇವಿಷ್ಟೂ ಕಠಿನವಾದ ಕೆಟ್ಟ ಲಕ್ಷಣಗಳು! ಪರಮಾತ್ಮನ ಮನಸ್ಸಿನ ಸಂಕಲ್ಪವು ಎಂತಹುದೆಂದು ಯಾರು ಹೇಳಲಾಪರು? ಅದುಕಾರಣ ರಾಜನಿಗೆ ಆವುದೋ ಒಂದು ಆಪತ್ತು ಉಂಟಾಗಬಹುದೆಂದು ಕುಲ ಪುರೋಹಿತನಾದ ವಸಿಷ್ಠನು ಚಿಂತೆಹಿಡಿದಿದ್ದನು. ಇಂತಹ ಸಂಘಟನೆಗಳು ದೂರಕ್ಕೆ ಸರಿದು, ಅರಸನಿಗೆ ಆವುದರಿಂದ ಮಂಗಲವುಂಟಾಗಬಹುದೊ ಅಂತಹ ಶಾಂತಿಸ್ವಸ್ತ್ಯಯನಾದಿಗಳನ್ನು ಅವನು ಪ್ರಾರಂಭಿಸಿ,—ಮಹಾ ರಾಜನಾದ ಹರಿಶ್ಚಂದ್ರನೂ ಗೋಪನದಲ್ಲಿ ವ್ರತಬದ್ಧನಾಗಿ, ರಾತ್ರಿಯಲ್ಲಿ ಎಚ್ಚತ್ತಿರಬೇಕೆಂದೂ ಅನುಜ್ಞೆಯನ್ನು ಮಾಡಿದನು. ಆದುದರಿಂದ ಹರಿಶ್ಚಂದ್ರನು, ಅಂದಿನ ರಾತ್ರಿಯಲ್ಲಿ ತನ್ನ ಅಂತಃಪುರಕ್ಕೆ ಹೋಗದೆ, ಅರಮನೆಯ ಹೊರಗಣ ಕೊಟ್ಟಡಿಯಲ್ಲೆ ನಿಯಮಬದ್ಧನಾಗಿ ರಾತ್ರಿಜಾಗರಣದ ವ್ರತವನ್ನು ಪಾಲನಮಾಡಿದನು. ಬೆಳಕು ಹರಿಯುತಲಿದ್ದಿತು; ಅದಾಗಲೆ, ಜಾಗರಣದಿಂದ ಕ್ಲಾಂತನಾಗಿದ್ದ ಅರಸನು ತನ್ನ ವಿದೂಷಕ ಮಿತ್ರನೊಡನೆ ಅರಮನೆಯಿಂದ ಹೊರಕ್ಕೆ ಬಂದನು.

ವಿದೂಷಕನು, ಅರಸನನ್ನು ಕಂಡು, ನಗುತ್ತ,—'ಮಿತ್ರಾ, ರಾತ್ರಿ ಜಾಗರಣದ ದೆಸೆಯಿಂದ ದಣಿದ ಮತ್ತು ಮಂಜುಮುಸುಕಿದ ಕಣ್ಣುಗಳಿಂದ,—ಆವೆಯು ಒಂದಿಷ್ಟೆ ಮೊಗವನ್ನು ಹೊರಕ್ಕೆ ಚಾಚಿ ದಿಟ್ಟಿಸುತಿರುವಂತೆ, ನೀನು ನೋಡುತಿದ್ದೀಯೆ. ಮತ್ತು ನಿನ್ನ ನಡೆಯಾದರೊ,—

ಮುದಿಯಾದ ಕುರುಡಿಲಿಯು ದಾರಿಗೆಟ್ಟು ಅತ್ತಿತ್ತ ತಬ್ಬಿಬ್ಬಾಗಿ ಉರು
ತಿರುವಾಗ ತೋರುವಂತೆ, ಸರಿಯಾಗಿದೆ!' ಎಂದು ಮಾತೆತ್ತಿದನು.

ಹರಿಶ್ಚಂದ್ರನು—'ಅಹ್ಹ! ನಿದ್ದೆಯೆ ಪ್ರಾಣಿಗಳು ಜೀವಹಿಡಿದ
ಕೊಂಡಿರುವಂತೆ ಮಾಡುವ ಮುಖ್ಯವಾದ ಸಾಧನವು. ನಿದ್ದೆಯಿಂದ
ಮನಸ್ಸು ಅರಳಿಕೊಂಡಿರುವುದು; ಎಲ್ಲ ಅಂಗಾಂಗಗಳು ಹಗುರವಾಗ
ವುವು; ಬುದ್ಧಿಯು ಬೆಳಗುವುದು; ದೇಹದ ಮತ್ತು ಮನಸ್ಸಿ
ದೋಷಗಳೆಲ್ಲವೂ ಕೀಳುವುವು; ಶರೀರವನ್ನು ಸಮತೂಕವಾಗಿರಿಸಿ, ನಿ
ಯು ಮನಸ್ಸಿನ ಧಾರಣಾಶಕ್ತಿಯನ್ನು ಆನಂದದಿಂದ ಉತ್ತೇಜಿತವಾ
ಮಾಡುವುದು. ಮತ್ತಿಲ್ಲಿ, ನೋಡಯ್ಯ—ನನ್ನ ದಶೆಯನ್ನು! ನಿದ್ರಾಲ
ದಿಂದ ದೇಹವೆಲ್ಲ ಕುಸಿದು ಬೀಳುವಂತಿದೆ. ಕ್ಲಾಂತಿಯಿಂದ ಮನಸ್ಸಿ
ಮಬ್ಬು ಕಟ್ಟಿದೆ. ಬಾಯಿಯಂತೂ ಬಾರಿಬಾರಿಗೂ ಆಕಳಿಸಿಕೊಳ್ಳುತಿದ
ಕಣ್ಣು, ಬೆಳಕಿನ ಕಿರಣವೊಂದನ್ನೂ ನೋಡಲು ಸಹಿಸಿಕೊಳ್ಳುವುದಿಲ್ಲ
ಇಂದೂ ಪುನಃ ರಾತ್ರಿಯಲ್ಲಿ ಜಾಗರಣಮಾಡಬೇಕೆಂದು ವಸಿಷ್ಠರ ಆಜ್ಞ
ಯಾಗಿದೆ; ಅವರ ಅಭಿಪ್ರಾಯವೇನೋ, ಅವರೇ ಬಲ್ಲರು! ಗುರುವಿ
ಆದೇಶವನ್ನು ಕುರಿತು ವಿಚಾರ ಮಾಡುವುದು ನನಗೆ ಉಚಿತವಾಗಿಲ್ಲ
ಅದನ್ನಂತೂ ಅನುಸರಿಸಲೇಬೇಕಷ್ಟೆ!' ಎಂದು ಉತ್ತರವಿತ್ತನು.

'ಹಾಗಿರುವುದಾದರೆ, ಇಂದೂ ರಾಣಿಯು ಅಲಂಕಾರಭೂಷಿ
ಯಾಗಿ, ಅಂತಃಪುರದಲ್ಲಿ ನಿನ್ನ ಆಗಮನವನ್ನು ನಿರೀಕ್ಷಿಸುತ್ತ, ಕೊನೆ
ಮೋಸಹೋಗುವಳು. ಇದರಿಂದ ಮಹಾ ಅನರ್ಥವು ಉಂಟಾಗಬಹುದ
ಇದಿಷ್ಟೆ ವಸಿಷ್ಠರ ಅಭಿಪ್ರಾಯವಲ್ಲದೆ, ಬೇರೆ ಏನದು?' ಎಂದು ವಿದೂ
ಷಕನೆಂದನು.

'ಅಹುದು. ದೇವಿಯೆಷ್ಟೋ ಬಗೆಯಾಗಿ ಭಾವಿಸಿ ಕುಳಿತುಕೊಳ
ವಳು! ಸಹಚರಿಗಳು ನಾನಾ ತರದ ಊಹಾಪೋಹಗಳಿಂದ ಅವ
ಮನಸ್ಸಿನಲ್ಲಿ ಕ್ಲೇಶವನ್ನುಂಟುಮಾಡಲೂ ಅವಕಾಶವಿರುವುದು'—ಎಂದ
ಅರಸನು ಪ್ರತಿಯಾಗಿ ಆಡಿದನು.

'ಆಗಿಹೋದ ಕಾರ್ಯಕ್ಕೆ ಈಗ ಚಿಂತೆಯೇಕೆ? ಅವಳಿರುವಲ್ಲಿಗೆ
ನಡೆದು, ಸಮಾಧಾನ ಪಡಿಸೋಣ'—ಎಂದು ವಿದೂಷಕನು ಹೇಳಲ

ಅರಸನು ಸಮ್ಮತಿಕೊಟ್ಟು, ಇಬ್ಬರೂ ರಾಣಿಯು ಇರುವಲ್ಲಿಗೆ ನಡೆದರು. ರಾಣೀವಾಸದಲ್ಲಿ, ಅಭಿಮಾನಭರಿತೆಯಾದ ಶೈಬ್ಯೆಯು ಒಂದು ಕಡೆಯಲ್ಲಿ ಕುಳಿತಿದ್ದಳು. ಸಖಿಯಾದ ಚಾರುಮತಿಯು ಅವಳಿಗೆ ಸ್ನಾನದ ಬಗ್ಗೆ ಅನುಕೂಲತೆಗಳನ್ನು ಒದಗಿಸಿಕೊಟ್ಟು ಇದಿರಿನಲ್ಲಿ ನಿಂತುಕೊಂಡಿದ್ದಳು. ಅಲ್ಲಿ ಏನೊ ಮಾತುಕತೆ ನಡೆಯುತಿದ್ದಿತು. ಕುತೂಹಲಗೊಂಡು, ಕೇಳೋಣವೆಂದು, ಅರಸನೂ ಮಿತ್ರನೂ ಕೊಂಚದೂರದಲ್ಲಿ ಅಡ್ಡವಾಗಿ ನಿಂತರು.

ರಾಣಿಯಲ್ಲಿ ಇಂದು ವೈರಾಗ್ಯವು ಹೆಚ್ಚಿರುವುದು. 'ಹೋಗೆಲೆ ದಾಸಿ, ಬೇಡ, ನಿಮ್ಮ ಉಪಚಾರಗಳ ಅಗತ್ಯವೇನೂ ಇಲ್ಲ. ಅವುಗಳಿಂದ ಲಾವರೂ ಪ್ರಯೋಜನವೆಷ್ಟಿರಬಹುದು? ಹೋಗವ್ವ, ನಡೆ. ದುಃಖದಿಂದ ನನ್ನ ಎದೆಯೊಡೆಯುತಿದೆ. ಆರ್ಯಪುತ್ರನು ನಮ್ಮನಂತೂ ವಂಚಿಸಿಯೇ ಇರುವನು. ನನ್ನ ಅದೃಷ್ಟವನ್ನು ಸುಡಬೇಕು!' ಎಂದು ಶೈಬ್ಯೆಯೆಂದಳು.

'ಪಾಪ! ಸೂರ್ಯನು ಮೋಡದ ಮರೆಯಲ್ಲಿರುವಾಗ ಕಮಲವು ಅವನ ದರ್ಶನದಿಂದ ವಂಚಿತೆಯಾಗುವುದಂತೂ ಇದೆ. ಆದರೆ, ಅಂತಹ ವಂಚನೆಯ ದೋಷವು ಸೂರ್ಯನಿಗೆ ತಟ್ಟದು; ಅವನನ್ನು ಆರೂ ದೂರುವುದೂ ಇಲ್ಲ'ವೆಂದು ಅರಸನು ಭಾವಿಸಿಕೊಂಡನು.

'ಅಮ್ಮಾ, ಒಡತಿ! ನೊಂದುಕೊಂಡೂ ಫಲವಿಲ್ಲ. ಅರಸರು ಬಹು ವಲ್ಲಭರೆಂದು ಹೆಸರುಪಡೆದವರಷ್ಟೆ!' ಎಂಬುದೇ ಚಾರುಮತಿಯ ಅಭಿಪ್ರಾಯವಾಗಿದ್ದಿತು.

ಈ ಮಾತನ್ನು ವಿದೂಷಕನು ಸಹಿಸಿಕೊಳ್ಳಲಾರದೆ,—'ಸುಡಬೇಕು, ನಿನ್ನ ಆ ನಾಲಗೆಯನ್ನು, ದಾಸೀ! ಅರಸರು ಬಹು ಕಾರ್ಯಗಳಲ್ಲಿ ಮಗ್ನರಾಗಿರುವವರೆಂದು ಹೇಳಬಾರದಾಗಿದ್ದಿತೆ? ಸುಮ್ಮನೆ ಮಹಾರಾಜನನ್ನು ರಾಣಿಯ ತಿರಸ್ಕಾರಕ್ಕೆ ಒಡ್ಡುತಿರುವೆ?' ಎಂದು ವಿದೂಷಕನು ತನ್ನಲ್ಲಿ ತಾನೆ ಎಂದುಕೊಂಡನು.

'ಮಿತ್ರಾ, ಸುಮ್ಮನೆ ದಾಸಿಯನ್ನು ದೂರಬೇಡ. ಅರ್ಥವು ಸುಲಭವಾಗಿ ಹೊಳೆಯುದಂತೆ ಮಾತುಗಳನ್ನು ಜೋಡಿಸುವ ಚಾತುರ್ಯವು ಹೆಂಗಸರಲ್ಲಿ ಸಾಮಾನ್ಯವಾಗಿಯೇ ಇರುವುದು. ಅದಂತಿರಲಿ, ಪತ್ನಿಯ

ಬಾಯಿಯಿಂದ ಹೊರಡುವ ಸುಳ್ಳು ಅಪವಾದಕ್ಕೆ ಅವ ಪತಿಯು ಒ
ಗಾಗುವನೊ, ಅವನೇ ಧನ್ಯನು!' ಎಂದು ಅರಸನೆಂದನು.

ಇಷ್ಟರಲ್ಲಿ, ತನ್ನ ಸೀರೆಯು ಸೆರಗಿನಿಂದ ಮೋರೆಯನ್ನು ಮುಚ್ಚಿ
ಕೊಂಡು, ಶೈಬ್ಯೆಯು ಅತ್ತುಕೊಂಡಳು. ದಾಸಿಯು.—'ಪಾಪ. ಅಳು
ದೇಕೆ! ನಿಮ್ಮ ದಾಕ್ಷಿಣ್ಯದಿಂದಲೂ ವಿಧೇಯತೆಯಿಂದಲೂ ಅರಸನು ಈ
ರೀತಿಯಾಗಿ ವರ್ತಿಸುವಂತೆ ನೀವೆ ಕಲ್ಪಿಸಿಕೊಟ್ಟಿರಲ್ಲವೆ? ಇದಕ್ಕೊಂದ
ಪ್ರತಿಕಾರವಿದೆ. ಏನೆಂದು ಹೇಳಲಿ?-ಮಹಾರಾಜನು ಏನೂ ಮಾತಾಡ
ತಿರಲಿ, ಆ ಕಡೆ ನೋಡಬಾರದು. ನೋಡುತಿದ್ದರೂ ನೋಡುತಿರುವಂ
ಕಾಣಿಸಿಕೊಳ್ಳಬಾರದು. ಪ್ರೀತಿಯಿಂದ ಆಡುತಿದ್ದರೂ ಮಧ್ಯೆ ಒಂದೊಂದ
ವಾಗ್ಬಾಣವನ್ನು ಹೂಡಿಬಿಡಲು ಮರೆಯಲಾಗದು. ಹೀಗಿರುವೆಯಾದ
ಮಹಾರಾಜನು ಮೃದುವಾಗಿ ಸರಿ ಹೋಗುವನು' ಎಂದಳು.

ರಾಣಿಯು—'ಹಾಗೆಯೆ ಮಾಡುವೆನು. ಆದರೆ ಆರ್ಯಪುತ್ರನನ್ನು
ಕಂಡ ಮೇಲೆ, ನನ್ನ ಮನಸ್ಸು ನನಗೆ ವಶವಾಗಿ ಇರುವುದೇ ಕಠಿನವಾಗಿ
ಯಲ್ಲ' ಎಂದು ನಿಟ್ಟುಸಿರಿದಳು.

ಹರಿಶ್ಚಂದ್ರನು ಮರೆಯನ್ನು ತೊರೆದು,-ರಾಣಿಗೆ ಇದಿರಾಗಿ ನಿಂತು.
'ಪ್ರಿಯೆ,—ನನಗೆ ಅಧೀನೆಯಾಗಿರುವೆಯಾದರೂ ನನ್ನನ್ನು ನಿನ್ನ ವಶವರ್ತಿ
ಯಾಗಿ ಇರಿಸಿಕೊಂಡಿರುವ ನೀನು, ನಿನ್ನನ್ನೆ ನಿನಗೆ ಅನುಕೂಲವಾಗಿರುವಂ
ಮಾತ್ರ ಇನ್ನೂ ಕಾಯುತಿರಬೇಕೆ?' ಎಂದನು.

'ಆರ್ಯಪುತ್ರನಿಗೆ ಜಯವಾಗಲಿ!' ಎಂದು ಶೈಬ್ಯೆಯು ಒಡನೆ
ಪತಿಯನ್ನು ವಂದಿಸಿದಳು. ಚಾರುಮತಿಯೂ ಅರಸನನ್ನು ವಂದಿ
ಆಸನವನ್ನು ತಂದಿರಿಸಿದಳು. ಅಭಿಮಾನಿಯಾದ ಶೈಬ್ಯೆಯನ್ನು ಕೂಡ
ಹರಿಶ್ಚಂದ್ರನು, ಕೊಂಚಹೊತ್ತಿನ ಮೇಲೆ,—"ದೇವಿ, ಒಮ್ಮೆ ನೀನು ನ
ಕಡೆಗೆ ನೋಡುವೆ; ಪುನಃ ಆ ಕಣ್ಣೊನೆಗಳನ್ನು ಅತ್ತಲಿತ್ತಲಿ
ತಿರುಗಿಸುವೆ! ಇದೇತಕ್ಕೆಂದು ಹೇಳಬಹುದೆ? ಮೈಯಲ್ಲಿ ತೊಡವುಗಳನ
ಇಟ್ಟುಕೊಂಡಿಲ್ಲ. ಇದರಿಂದ ನಿನ್ನ ಸ್ವಾಭಾವಿಕವಾದ ಕಾಂತಿಯ
ವ್ಯಕ್ತವಾಗುತಿದೆಯಾದರೂ, ನಿನ್ನ ಆ ಔದಾಸೀನ್ಯದ ಬೆಸೆಯಿಂದ, ನೀ
ನನ್ನನ್ನು ಕೋಪದಿಂದ ಕಾಣುತ್ತಿರುವೆಯೆಂದೂ ಸ್ಪಷ್ಟವಾಗುತ್ತಿದೆ" ಎಂ
ಮಾತಾಡಿಸಿದನು.

'ನಿದ್ರಾಲಸ್ಯದಿಂದ ತುಂಬಿ, ಜಾಗರಣದ ದೆಸೆಯಿಂದ ತೂಕಡಿಸುವಂತಹ ಕಣ್ಣುಗಳನ್ನುಳ್ಳ ನೀನು, ಅಹ್ಹ, ಇಂದು ಬಹು ಸುಂದರನಾಗಿ ಕಾಣುತ್ತಿರುವೆ!' ಎಂದು ಶ್ಲೇಷಾರ್ಥದಿಂದ ನುಡಿದಳು.

'ಓಹೋ, ಇಷ್ಟೇಯೆ, ನನ್ನ ದೋಷವು? ತಿಳಿಯಿತು. ನನ್ನಲ್ಲಿ ದೋಷವನ್ನು ಕಂಡರೆ ನನಗೆ ತಕ್ಕ ಶಿಕ್ಷೆಯಾಗಲಿ! ಆದರೆ, ನಾನು ನಿರ್ದೋಷಿಯೆಂದು ಪ್ರಮಾಣವಾಗಿ ಹೇಳಲು ನಮ್ಮ ಕುಲಪತಿಯುರಾದ ವಸಿಷ್ಠರೆ ಇರುವರಷ್ಟೆ!' ಎಂದು ಅರಸನೆಂದನು.

ಇಷ್ಟರಲ್ಲಿ, ಪರಿಚಾರಿಕೆಯಾದ ಹೇಮಪ್ರಭೆಯು ಅಲ್ಲಿಗೆ ಬಂದು, ಕುಲಪತಿಯುರು ಓರ್ವ ತಾಪಸನನ್ನು ಅಲ್ಲಿಗೆ ಕಳುಹಿರುವರೆಂದು ವಿಜ್ಞಾಪಿಸಿಕೊಳ್ಳಲು; ಅರಸನ ಆದೇಶದಿಂದ ಆ ತಾಪಸನೂ ಅಲ್ಲಿಗೆ ಬಂದನು. ಹರಿಶ್ಚಂದ್ರನೂ ಶೈಬ್ಯೆಯೂ ತಾವೆದ್ದುಕೊಂಡು ಆ ತಾಪಸನನ್ನು ಸಾಷ್ಟಾಂಗವಂದಿಸಿದರು.

'ರಾಜನೆ, ನೀನು ವಿಜಯಿಯಾಗು! ಮಹಾರಾಣಿಯೆ, ನೀನು ವೀರ ಪ್ರಸವಿನಿಯಾಗು!' ಎಂದು ತಾಪಸನು ಅವರನ್ನು ಆಶೀರ್ವದಿಸಿದನು.

ಪರಿಚಾರಿಕೆಯು ಅವನಿಗೆ ಆಸನವನ್ನು ತಂದಿರಿಸಿದಳು. ರಾಜನ ಬಿನ್ನಹದಂತೆ ತಾಪಸನು ಆಸನವನ್ನೇರಿದನು. ಎಲ್ಲರೂ ಕುಳಿತುಕೊಂಡರು. ತಾಪಸನು,–"ರಾಜನ್! ಭಗವಾನ್ ಕುಲಪತಿಯು ರಾತ್ರಿಜಾಗರಣದ ನಂತರ, ಪತ್ನೀಸಮೇತನಾದ ನಿನ್ನ ಅಭಿಷೇಚನಕ್ಕೆಂದು ತನ್ನ ಆಶೀರ್ವಾದೀಯವಾದ ಈ ಶಾಂತಿಜಲವನ್ನು ನನ್ನೊಡನೆ ಕೊಟ್ಟು ಕಳುಹಿರುವನು. ಅದನ್ನು ಪರಿಗ್ರಹಿಸಬೇಕು" ಎಂದರು. 'ಇದುವೆ ಭಗವಾನರ ಅನುಗ್ರಹವು' ಎಂದು ಹರಿಶ್ಚಂದ್ರನು ಅವನನ್ನು ಕುರಿತು ನುಡಿದನು.

'ಅಮಂಗಲವನ್ನು ದೂರಗೊಳಿಸುವಂತಹ ಮಂತ್ರಗಳಿಂದ ಪವಿತ್ರವಾಗಿಯೂ, ಕ್ಷಾತ್ರತೇಜವನ್ನು ವೃದ್ಧಿಗೊಳಿಸುವುದಾಗಿಯೂ ಆಗಿರುವ ಪರಮಪಾವನವಾದ ಈ ಜಲವು, ನಿಮಗೆ ಸಾರ್ವದಾ ಮಂಗಲವನ್ನುಂಟುಮಾಡಲಿ! ನಿಮಗೆ ಆನಂದವನ್ನು ತರುವುದಾಗಿರಲಿ!!" ಎನ್ನುತ್ತ ಆ ತಾಪಸನು ಆ ಶಾಂತಿಜಲವನ್ನು ರಾಜನ ಮತ್ತು ರಾಣಿಯ ಶಿರೋಭಾಗಗಳಲ್ಲಿ ಪ್ರೋಕ್ಷಿಸಿದನು.

'ಇದಲ್ಲವೆ,—ಈ ರಾಜಕುಲವೃಕ್ಷದಲ್ಲಿ ಅಂಕುರವನ್ನು ಚಿಗುರಿಸ
ವಂತಹ ಆ ಪವಿತ್ರಜಲವು? ಇದರ ಪ್ರಸಾದದಿಂದಲ್ಲವೆ ಇಂದಿ
ಸೂರ್ಯವಂಶವು ಜಗತ್ತಿನಲ್ಲಿ ತಲೆಯನ್ನೆತ್ತಿ ಇರುತ್ತಿದೆ?' ಎಂದು ಅರಸನ
ಸಂತೋಷದಿಂದ ಎಂದನು.

"ಮಹಾರಾಣಿಯಾದ ಶೈಬ್ಯೆಯೆ! ಕುಲಪತಿಯು ಆದೇಶಕ್ಕನುಸಾ
ವಾಗಿ ನೀನು ಇಂದು ಗೃಹದೇವತೆಯನ್ನೂ ಬ್ರಾಹ್ಮಣಗಣವನ್ನೂ ಅರ್ಚನ
ಮಾಡತಕ್ಕದಾಗಿದೆ" ಎಂದು ಅನುಜ್ಞೆಮಾಡಿ ತಾಪಸನು ಅಲ್ಲಿಂದ ತನ್ನ
ಆಶ್ರಮಕ್ಕೆ ಮರಳಿದನು.

ರಾಜನೂ ರಾಣಿಯೂ ಆ ಪವಿತ್ರ ಜಲವನ್ನು ಪ್ರೋಕ್ಷಿಸಿಕೊಂಡರು
ಆಗ ರಾತ್ರಿ ಜಾಗರಣದ ದೆಸೆಯಿಂದ ಅರಸನ ದೇಹದಲ್ಲಿ ಇದ್ದ ಕ್ಲಾಂತ
ತೆಯು ದೂರಗೊಂಡು ಅವನು ಪುನಃ ಚೇತನವನ್ನು ಹೊಂದಿದನು
ರಾಣಿಯೂ ಆ ತೀರ್ಥದ ಅಭಿಷಿಂಚನಮಾತ್ರದಿಂದ, ತನ್ನ
ಅರಸನ ಮೇಲಿನ ವಿರಾಗವನ್ನು ಕಳೆದುಕೊಂಡಳು.

ತಾಪಸನು ಅಲ್ಲಿಂದ ತೆರಳಿದ ನಂತರ, ಶೈಬ್ಯೆಯ ಮನಸ್ಸಿನಲ್ಲಿ
ಲಜ್ಜೆಯು ಮೂಡಿತು. ಕುಲಪತಿಯು, ಮಹಾರಾಜನು ರಾತ್ರಿಯ
ಜಾಗರಣವನ್ನು ಮಾಡಬೇಕೆಂದು ಎಚ್ಚರಿಸಿದ್ದನಾದರೂ, ತಾನು ಹೀ
ದುರ್ಜನರಂತೆ, ಪತಿಯನ್ನು ದುಷ್ಟನೆಂದು ನಿಂದಿಸಿದುದಕ್ಕೆ ಅವಳ
ಅನುತಾಪವುಂಟಾಯಿತು. ಆದುದರಿಂದ ಅವಳು, ಕೃತಾಂಜಲಿಯಾಗಿ,
'ಆರ್ಯಪುತ್ರನು ಪ್ರಸನ್ನನಾಗಬೇಕು,' ಎಂದು ಪ್ರಾರ್ಥಿಸಿಕೊಂಡಳ
ಹರಿಶ್ಚಂದ್ರನು ಅವಳಿಗೊಂದು ಹಾರವನ್ನು ಉಡುಗೆರೆಯಾಗಿ ಅವ
ಕಂಠಕ್ಕೆ ತೊಡಿಸಿದನು. ಆಗ ಆಕೆಯು ಅಲ್ಲಿಂದ ತಾನು ಕುಲಪತಿ
ಆದೇಶದಂತೆ, ಪೂಜೆ ಅರ್ಚನೆಗಳನ್ನು ಮಾಡಿಸುವೆನೆಂದು ಹೊರಟಳ

ರಾಜನ ಮನಸ್ಸು ಚೆನ್ನಾಗಿ ದಣಿದಿದ್ದಿತು. 'ಹೇಗೆ ತಾನೆ
ಮನಸ್ಸನ್ನು ವಿನೋದಗೊಳಿಸಲಿ?' ಎಂದು ಅವನು ವಿದೂಷಕನನ
ಕೇಳಿದನು. ವಿದೂಷಕನಾದರೊ,—ಭೋಜನ ಸಿದ್ಧತೆಯನ್ನು ಕುರಿತಾ
ಚಿಂತಿಸಿ, ತನ್ನ ಚಿತ್ತವನ್ನು ತಾನು ವಿನೋದಗೊಳಿಸುವೆನೆಂದನು.

ಇಷ್ಟರಲ್ಲಿ ಅರಸನ ಕಾಡುಗಾವಲಿನ ಆಳು ಅಲ್ಲಿಗೆ ಉಸಿರಿಗೆ ತಡೆಗಟ್ಟುವಂತಹ ಓಟದಿಂದ ಬಂದು,—ಭಯಂಕರವಾದ ಆದೊಂದು ವರಾಹವು ಬೇಟೆಯಕಾಡನ್ನೆಲ್ಲ ಕದಡಿಸಿ ಬಿಟ್ಟಿರುವುದೆಂದು ಭಯದಿಂದ ಬಿನ್ನವಿಸಿಕೊಂಡನು.

ಇವನ್ನು ಕೇಳುತ್ತಲೆ, ಹರಿಶ್ಚಂದ್ರನಲ್ಲಿ ಸಂತೋಷವು ಉಕ್ಕಿ ಬಂತು. 'ಮನೋಲ್ಲಾಸಕ್ಕೆ ಇದೆಯೊಂದು ಯೋಗ್ಯವಾದ ಸಂದರ್ಭವು! ಏನಯ್ಯ—ಮಿತ್ರನೇ?' ಎಂದು ವಿದೂಷಕನನ್ನು ಕೇಳಲು, ಅವನು,—'ಅಹಹ, ಮುಳ್ಳುಪೊದೆಗಳನ್ನು ತುಳಿಯುತ್ತ, ದಿನ್ನೆಗಳನ್ನು ಹತ್ತಿ ದಾಟುತ್ತ, ಸೀರಡಿಸಿ ಹಸಿವಿಡಿದು ಕಾಡನ್ನೆಲ್ಲ ಸುತ್ತಿ, ಕಾಲಹರಣ ಮಾಡುವುದು ನಿನಗೆ ಮನೋಲ್ಲಾಸಕರವೆನಿಸಿದರೆ,—ನಿನಗೆ ಆಯಾಸವೆಂಬುದು ಯಾವ ಬಗೆಯ ಸ್ವರೂಪವನ್ನುಳ್ಳುದೆಂದು ನಾನಂತೂ ಹೇಳಲಾರೆನು" ಎಂದು ಬಿಸುಸುಯ್ದನು.

'ಸಖನೆ! ಮೃಗಯೆಯೆ ಅರಸನಿಗೆ ಉಪಕಾರವನ್ನುಂಟುಮಾಡುವಂತಹುದು. ಖಿನ್ನತೆಗೊಂಡ ಚಿತ್ತವು ಅದರಿಂದ ಪ್ರಸನ್ನವಾಗುವುದು. ಚಂಚಲವಾದ ಲಕ್ಷ್ಯವು ಅದರಿಂದ ಸ್ಥಿರತೆಯನ್ನು ಪಡೆವುದು; ದೇಹವು ಹಗುರವಾಗುವುದು; ಯುದ್ಧದಲ್ಲಿ ಕುಶಲತೆಯನ್ನುಂಟುಮಾಡುವ ಉತ್ಸಾಹವೂ ಬುದ್ಧಿಯೂ ಉತ್ತೇಜಿತನಾಗುವುವು. ಮೃಗಬೇಟೆಯು ಅರಸುಗಳ ವ್ಯಸನವೆಂದು ಜನಗಳು ಸುಳ್ಳಾಡುವುದು ಹಾಗಿರಲಿ!—ನಾವು ಬೇಟೆಗಾಗಿ ಹೋಗೋಣ!'ವೆಂದು ಹರಿಶ್ಚಂದ್ರನು ಅಲ್ಲಿಂದ ಮಿತ್ರನೊಡನೆ ಬೇಟೆಗೆ ಸಿದ್ಧನಾಗಿ ತೆರಳಿದನು.

---

## ಎರಡನೆ ಅಂಕ

ಮಹರ್ಷಿಯಾದ ವಿಶ್ವಾಮಿತ್ರನು ತ್ರಿಲೋಕಗಳನ್ನೂ ಎರಡನೆ ಬಾರಿ ಸೃಷ್ಟಿಮಾಡಲೆಳಸಿ, ಈ ಸಂಕಲ್ಪದ ಸಿದ್ಧ್ಯರ್ಥವಾಗಿ, ಸೃಷ್ಟಿ-ಸ್ಥಿತಿ-ಲಯ ವಿಧಾಯಿನಿಯರಾದ ತ್ರಿ-ವಿದ್ಯೆಗಳನ್ನು ಕೈಗೂಡಿಸಿಕೊಳ್ಳಲು ಆಗತ್ಯವಾದಂತಹ ಕಠೋರವಾದ ತಪಸ್ಸಿನಲ್ಲಿಯೆ ಮಗ್ನನಾಗಿದ್ದನು. ಬ್ರಹ್ಮ, ವಿಷ್ಣು,

ರುದ್ರ,—ಈ ಮೂವರು ಒಬ್ಬೊಬ್ಬರು ಒಂದೊಂದು ವಿದ್ಯೆಗೆ ಅಧಿಕಾ ಗಳಾಗಿರುವರು ವಿಶ್ವಾಮಿತ್ರನು ಇವು ಮೂರು ವಿದ್ಯೆಗಳಿಗೂ ತಾನೊಬ್ಬನೆ ಅಧಿಕಾರಿಯಾಗಿ, ಸೃಷ್ಟಿಸ್ಥಿತಿಲಯಗಳಿಗೆ ತಾನೇ ಅಧಿಪತಿಯಾಗುವಂ ಸಂಕಲ್ಪ ಮಾಡಿದನು. ದೇವವಿರೋಧಿಯಾದ ವಿಶ್ವಾಮಿತ್ರನಿಂದ ಈ ಮಹಾಕಾರ್ಯವು ಕೈಲಾಗದಂತೆ ನೋಡಿಕೊಳ್ಳುವೆನೆಂದು ವಿಘ್ನರಾಜನ ಬಗೆದಿದ್ದನು. ತಾಪಸರು ಸಿಟ್ಟಾದರೆ, ಅವರ ತಪಸ್ಸೆಲ್ಲ ಕೆಡುವುದು ಆವುದೊಂದು ವಿಘ್ನವನ್ನೊಡ್ಡಿ ವಿಶ್ವಾಮಿತ್ರನಲ್ಲಿ ಕೋಪವನ್ನು ಹುಟ್ಟಿಸಿದರೆ ಆದಾಗಲೆ ಅವನ ಸಾಧನೆಗಳೆಲ್ಲ ನಾಶವಾಗಿ, ವಿದ್ಯೆಗಳು ಅವನಿಗೆ ಹಸ್ತ ಗತವಾಗವು. ಹರಿಶ್ಚಂದ್ರನೊಬ್ಬನಿಂದಲ್ಲದೆ ಮತ್ತಾರಿಂದಲೂ ವಿಶ್ವಾಮಿತ್ರನ ಘೋರತಪಕ್ಕೆ ತಡೆಗಟ್ಟುವುದು ಸಾಧ್ಯವಲ್ಲ. ಅವನಾದರೂ ತಾನಾ ತಿಳಿದು ಇಂತಹ ಅಸಾಧ್ಯವಾದ ಕೆಲಸಕ್ಕೆ ಕೈಹಚ್ಚಲೊಲ್ಲನು. ಆದ ಕೌಶಲದಿಂದ ಈ ಕೆಲಸವನ್ನು ಅವನಿಂದಲೆ ಮಾಡಿಸಿಕೊಳ್ಳಬಹುದಾಗಿದೆ ಮೃಗವಿಲಾಸಿಯಾದ ಹರಿಶ್ಚಂದ್ರನನ್ನು ವನಕ್ಕೆ ಬರಮಾಡಿಕೊಂಡು ವಿಶ್ವಾಮಿತ್ರನ ಆಶ್ರಮದ ಒಳಗೆ ಸೆಳೆದುಯ್ದರೆ ವಿಘ್ನರಾಜನ ಅಭೀಷ್ಟ ಈಡೇರಿದಂತಾಗುವುದು. ಈ ಉಪಾಯವನ್ನು ಸಿದ್ಧಮಾಡಿಕೊಂಡ ವಿಘ್ನರಾಜನು ಈಗಳೊಂದು ಭೀಕರವಾದ ಕಾಡುಹಂದಿಯ ರೂಪವನ ತಾನೇ ತಾಳಿಕೊಂಡು, ಮೃಗಯಾಕಾನನದಲ್ಲಿ ಉಪಸ್ಥಿತನಾದನು.

ಈ ವರಾಹವನ್ನು ವಧಿಸುವೆನೆಂದು ಹರಿಶ್ಚಂದ್ರನು ಅಲ್ಲಿಗೆ ಬಂದೆ ಬಂದನು. ಇದೊ, ಇಲ್ಲಿ ತಾನೆ ತೋರುತ್ತ, ಒಡನೆ ಮಾಯವಾಗುತ್ತ ಹರಿಶ್ಚಂದ್ರನ ದೃಢವಾದ ಗುರಿಯನ್ನು ಬಾರಿಬಾರಿಗೂ ತಪ್ಪಿಸಿಕೊಂಡು ಈ ಮಾಯಾಮೃಗವು ಬಲುದೂರಕ್ಕೆ ಅವನನ್ನು ಸೆಳೆದುಯ್ದುದ ಹರಿಶ್ಚಂದ್ರನು, ತನ್ನಲ್ಲಿ ಉಂಟಾದ ಉತ್ಸಾಹದ ಪೆಸೆಯಿಂದ, ತನ್ನ ತಾನು ಮರೆತು, ತನ್ನ ರಥವನ್ನು ಆ ಮೃಗವು ಹಿಡಿದ ದಾರಿಯನ್ನ ಹಿಡಿವಂತೆ ಓಡಿಸಿದನು. ಅತ್ತಲೊಂದು ಆಶ್ರಮವಿದ್ದಿತು ಮೃಗವು ಆ ಆಶ್ರಮವನ್ನು ಪ್ರವೇಶಿಸಿತು. ಆಶ್ರಮಗಳಲ್ಲಿ ಪಶುಗಳನ್ನು ಕೊಲ್ಲುವುದು ಮಹಾ ಪಾಪವು; ಅದು ನಿಷಿದ್ಧವಾಗಿಯೇ ಇರುವುದು. "ಸಾರಥಿ ವರಾಹವು ಈ ಆಶ್ರಮದೊಳಕ್ಕೆ ಓಡಿರುವುದು. ಇಲ್ಲಿಗೆ ಈ ರಥವನ ತಡೆ. ಕುದುರೆಗಳು ಇಲ್ಲಿ ನೀರ್ಕುಡಿದು ದಣುವಾರಿಸಿಕೊಂಡಿರಲಿ

ನಾನು ಮುನಿಗಳಿಗೆ ಸಾಷ್ಟಾಂಗವೆರಗಿ, ಆಶೀರ್ವಾದವನ್ನು ಪಡೆದು ಹಿಂದಿರುಗುವೆನು" ಎಂದು ಆತನು ಸಾರಥಿಯನ್ನು ಆಜ್ಞಾಪಿಸಿ, ತಾನು ಆ ತಪೋವನಾಶ್ರಮವನ್ನು ಪ್ರವೇಶಿಸಿದನು.

ಆಹ! ಎಲ್ಲ ತಡೆಗಳೂ ದೂರಗೊಂಡು, ಈ ಸ್ಥಳದಲ್ಲಿ ವಾಸ ಮಾಡುವ ಮುನಿಗಳಿಗೆ ಒದಗುವ ಶಾಂತತೆಯು ಅದೆಷ್ಟು ರಮಣೀಯ ವಾಗಿದೆ! ವಿಷಯವಾಸನೆಗಳಲ್ಲಿ ವಿರತವಾಗಿರುವ ಮನಸ್ಸನ್ನು ಯಾವ ಬಗೆಯ ಭೋಗಗಳೂ ಮುಟ್ಟಲಾರವು; ಮಮತೆಯನ್ನು ಕಾಣದ ಮನಸ್ಸನ್ನು, ಸ್ನೇಹವಿಯೋಗಗಳಿಂದ ಉಂಟಾಗುವ ಶೋಕವೂ ತಟ್ಟ ಲಾರದು: ಅಹಂಕಾರತ್ಯಾಗದ ದೆಸೆಯಿಂದ ಆತ್ಮಪರವಾದ ಭೇದವೂ ಹುಟ್ಟಲಾರದು; ಪರಮ ಶಾಂತಿಲಾಭದಿಂದಲೂ, ಸಂಯಮಧನದಿಂದ ಲೂ ಸೌಭಾಗ್ಯಶಾಲಿಗಳಾಗಿರುವ ಋಷಿಗಳು ಅವರೆಷ್ಟು ಸುಖಿಗಳು!! ಆದರೆ, ಇಂತಹ ಶಾಂತಿನಿಕೇತನದಲ್ಲೂ ನಾನೇನೊ ಅಪರಾಧಿಯಂತೆ ಭೀತಿಗೊಂಡಿರುವೆನೇಕೆ? ಸಕಲತೇಜಗಳಿಗೂ ಮೂಲಕಾರಣವಾದ ತಪೋಮಯವಾದ ಬ್ರಹ್ಮತೇಜವು ಎಲ್ಲ ತೇಜಗಳನ್ನು ಅಭಿಭೂತವನ್ನಾಗಿ ಮಾಡುವುದು. ಜಲದಿಂದಲೆ ಬೆಂಕಿಹುಟ್ಟಿದುದು; ಅದು ಕಾರಣದಿಂದಲೆ ಶಾಂತವೂ ಶೀತಲವೂ ಆಗಿರುವ ನೀರಿನ ಸ್ಪರ್ಶದಿಂದ ಉಗ್ರವಾದ ಅಗ್ನಿ ಯೂ ಮೃದುವಾಗುವುದಷ್ಟೆ!

ಇದಿಷ್ಟರೊಳಗಾಗಿ, ಸಮೀಪದಲ್ಲಿ,–"ರಕ್ಷಿಸಿರಿ, ಕಾಪಾಡಿರಿ! ಅಪರಾಧವೇನೂ ಇಲ್ಲದೆ, ಅನಾಥೆಯರೂ ಅಶರಣೆಯರೂ ಮಂದಭಾಗಿನಿ ಯರೂ, ಆದ ನಮ್ಮನ್ನು ಅಗ್ನಿಯಲ್ಲಿ ತಳ್ಳುತಿದ್ದಾರೆ!" ಎಂಬುವ ಸ್ತ್ರೀಕಂಠದ ಕರುಣಧ್ವನಿಯು ಅಲ್ಲಿಗೆ ಕೇಳಿಸಿಕೊಂಡಿತು.

ಹರಿಶ್ಚಂದ್ರನು ಚಮಕಿತನಾದನು. ಇದೆಲ್ಲಿಯದು! ಅದೂರದಲ್ಲೆ ಭಯಾರ್ತೆಯರಾದ ಸ್ತ್ರೀಯರ ಆರ್ತಪ್ರಲಾಪವು ಕೇಳಿಸುವುದು! ಇದು ತಪೋವನವಂತೆ! ಇಲ್ಲಿ ಇಂತಹ ಪಾಪಕೃತ್ಯವನ್ನೂ ಮಾಡಲು ಹೇಸದ ದುಷ್ಟರು ಇರುವುದು ಸಂಭವವೆ?

ಇನ್ನೊಮ್ಮೆ ಅದೇ,–ರೋದನದಿಂದೊಡಗೂಡಿದ ಪ್ರಾರ್ಥನಾ ಧ್ವನಿಯು!! ಇನ್ನು ಹರಿಶ್ಚಂದ್ರಮಹಾರಾಜನು ಸುಮ್ಮನಿರುವನೆ?— "ಭಯವಿಲ್ಲ, ಹೆದರದಿರಿ! ಭಯಗೊಂಡವರಿಗೆ ಅಭಯವಿದು!! ಯಾರಿಷು.

ಇಲ್ಲಿ ಆತ್ಮಕ್ಕೆ ಅಹಿತವನ್ನು ತಾನೇ ಸಾಧಿಸಿಕೊಳ್ಳುತ್ತಿದ್ದಾನೆ? ಯಾರವನು,–ತಪೋವನಕ್ಕೆ ವಿರುದ್ಧವಾದ ಘೋರ ನೃಶಂಸಕರ್ಮದ ಅನುಷ್ಠಾನವನ್ನು ಮಾಡುತಿರುವನು? ಇದುವೆ ಬಾಣದಿಂದ ಅವನ ಕೊರಲನ್ನು ಕತ್ತರಿಸಿ, ಅವನ ಅಂಗಾಂಗಗಳನ್ನು ತುಂಡುತುಂಡಾಗಿ ಉರಿಯುವ ಅಗ್ನಿಯಲ್ಲಿ ಆಹುತಿಗೊಡುವೆನು!!" ಎಂದು ಜಿವನು ಉಚ್ಚಸ್ವರದಿಂದ ಕರೆದು ನುಡಿದನು.

ಕ್ರೋಧದ ಆವೇಗದಿಂದ ಹರಿಶ್ಚಂದ್ರನು ಇದಿರಿಗೆ ನೋಡುತಿರುವಾಗ,–ಅಲ್ಲಿ, ಪ್ರಜ್ವಲಿತವಾದ ಹೋಮಾಗ್ನಿಯ ಸಮ್ಮುಖದಲ್ಲಿ ಸಾಮಗ್ರಿಗಳನ್ನು ಇರಿಸಿಕೊಂಡು ಯಾವನೋ ಒಬ್ಬನು ಕುಳಿತಿರುವುದನ್ನೂ. ಅಗ್ನಿಯ ಮಧ್ಯದಲ್ಲಿ ಭಯಾರ್ತೆಯರಾದ ಮೂವರು ನಾರೀಮೂರ್ತಿಗಳು ವಿಲಾಪಮಾಡುವುದನ್ನೂ ಕಂಡನು!!

ಈತನೇ ವಿಶ್ವಾಮಿತ್ರನು; ಮತ್ತಾ ಮೂರ್ತಿಯರೇ ತ್ರಿ-ವಿದ್ಯೆಗಳು. ಮೂರ್ತಿಮಂತಾಗಿ ಅಗ್ನಿಕುಂಡದಲ್ಲಿ ಅಭಿಭೂತೆಯರಾಗಿದ್ದರೂ, ಅವನ ವಶೀಭೂತರಾಗಲು ಕಿಂಚಿನ್ಮಾತ್ರವೂ ಸಮ್ಮತಿಸುವುದಿಲ್ಲ. ವಿಶ್ವಾಮಿತ್ರನು ಅವರನ್ನು ವಶವಾಗಿರಿಸಿಕೊಳ್ಳಲು ಸುತ್ರೊತ್ವಮ್ಮ ಧ್ಯಾನಸ್ಥನಾಗಿ, ಮಂತ್ರಗಳನ್ನು ಉಚ್ಚರಿಸುತಿದ್ದನು.

ಹರಿಶ್ಚಂದ್ರನನ್ನು ಕಂಡಾಕ್ಷಣ ಪುನಃ ಆ ದೇವತೆಗಳು ದುಃಖದಿಂದ ಮೊರೆಯಿಟ್ಟುವು. ಆಗ ರಾಜನು,—'ಎಲೆ ದುರಾತ್ಮನೆ, ಪಾಷಂಡಾಧಮನೆ, ಕಪಟವೇಷದ ರಾಕ್ಷಸನೆ, ಇದೇನು ನಿನ್ನ ನಿಷ್ಠುರವಾಯೆಯು? ಶಾಂತನೂ ಜಿತೇಂದ್ರಿಯನೂ ಆಗಿರುವ ಮುನಿಯ ವೇಷವನ್ನು ತಳೆದುಕೊಂಡಿದ್ದು, ಈ ಜಘನ್ಯವಾದ ನಿಷ್ಠುರಾಚರಣೆಗೂ ನೀನು ಹೇಸುವಂತಿಲ್ಲ. ನಾರೀವಧೆಯನ್ನು ಮಾಡಲೆಳಸಿರುವೆ! ನಿನ್ನ ಪಾಪಕ್ಕೆ ತಕ್ಕುದಾದ ಪ್ರತಿಫಲವನ್ನು ಈಗಲೆ ಕೊಡುವೆನು' ಎಂದು ಗರ್ಜಿಸಿ, ಧನುರ್ಬಾಣಗಳನ್ನು ಎತ್ತಿಹಿಡಿದನು.

ವಿಶ್ವಾಮಿತ್ರನ ಧ್ಯಾನಕ್ಕೆ ಭಂಗವುಂಟಾಯಿತು. ಕೋಪದಿಂದ ಕಿಡಿಹಾರಿಸಿ, ಅವನು, 'ಯಾರೊ ನೀನು? ನಿನ್ನೀ ಕಟುವಾಣಿಯ ತಿಕ್ಕಾಟದಿಂದ ಉಂಟಾಗಿ, ಸಮಾಧಿಸ್ಥನಾದ ನನ್ನ ಧ್ಯಾನಭಂಗದ ದೆಸೆಯಿಂದ ಹೊರಟು, ಮನಃಕ್ಷೋಭೆಯ ಗಾಳಿಯಿಂದ ಹೊಗೆದುರಿವ, ನನ್ನ ಮಹಾ

ಜ್ಯೋತಿಯುಳ್ಳ ಕೋಪಾಗ್ನಿಯಲ್ಲಿ, ಇದ್ದಲಿನಂತೆ ತಾನಾಗಿ ತಳ್ಳಿಕೊಂಡು ಬೀಳಲಿಕ್ಕಿರುವ ನೀನ್ಯಾರು? ಪ್ರಲಯಾಗ್ನಿಯಂತೆ ಮೂರೂ ಲೋಕಗಳನ್ನು ಸುಟ್ಟುಬಿಡಲು ಆಸೆ ಹಿಡಿದಿರುವ ನನ್ನ ಈ ಕ್ರೋಧವು ನಿನ್ನನ್ನೆ ದಹಿಸಿ ಶಾಂತವಾಗುವುದು!!' ಎಂದು ಹಲ್ಕಡಿದು ನುಡಿದನು!

ಕ್ರೋಧದ ದೆಸೆಯಿಂದ, ವಿಶ್ವಾಮಿತ್ರನ ತಪಸ್ಸಿನ ಫಲವೂ ಮಂತ್ರದ ಬಲವೂ, ಕ್ಷಣಮಾತ್ರದಲ್ಲಿ ನಷ್ಟವಾಗಿ ಕಳೆದುವು.

'ನಮಗೆ ಮಂಗಲವುಂಟಾಯಿತು!! ಜಯ, ಮಹಾರಾಜನಾದ ಹರಿಶ್ಚಂದ್ರನಿಗೆ ಜಯವಾಗಲಿ!" ಎಂದು, ಬಂಧನದಿಂದ ಹೊರಬಿದ್ದ ಆ ದೇವತೆಗಳು ಅವನನ್ನು ಹರಿಸಿ, ತಪೋಭ್ರಷ್ಟನಾದ ವಿಶ್ವಾಮಿತ್ರನ ಯಜ್ಞ ಕುಂಡದಿಂದ ಮಾಯವಾದರು.

'ಏನಿದು? ತಾನು ಶ್ರೇಯಸ್ಸನ್ನು ಸಂಪಾದಿಸಿಕೊಂಡು ನನ್ನನ್ನು ವಂಚಿಸಿದವನು ದುರಾತ್ಮನಾದ ಹರಿಶ್ಚಂದ್ರನೇ' ಎಂದು ಕೋಪದಿಂದ ಉರಿದೇಳುವ ವಿಶ್ವಾಮಿತ್ರನ ಮೂರ್ತಿಯು ಹರಿಶ್ಚಂದ್ರನನ್ನು ದಿಟ್ಟಿಸಿ,— 'ನಿಲ್ಲು, ಕ್ಷತ್ರಿಯಾಧಮನೆ,—ತಡೆ ತಡೆ! ನೀನು ಹರಿಯಾಗಿರಲಿ, ಚಂದ್ರನಾಗಿರಲಿ, ಅಥವಾ ಚಂದ್ರಾರ್ಧಮೌಳಿಯಾದ ಹರನೇ ಆಗಿರಲಿ, ವಿದ್ಯಾನಾಶದಿಂದ ಉಕ್ಕಿಹಾರುವ, ಬ್ರಹ್ಮಾಂಡವನ್ನು ನೆಕ್ಕುವ ನಾಲಗೆಯ, ಘೋರ ಜ್ಯೋತಿಯ ನನ್ನೀ ಕ್ರೋಧಾಗ್ನಿಯು ನಿನ್ನನ್ನು ಒಣಹುಲ್ಲಿನಂತೆ ಸುಟ್ಟು ಬೂದಿಯನ್ನಾಗಿ ಮಾಡದಿರುವುದೆ? ಮೊದಲು,—ಶಾಂತನೂ ಸಂಯಮಿಯೂ ಆದ ಮಹಾದೇವನು ಸಮಾಧಿಭಂಗವುಂಟಾದಾಗ, ಶರಾಸನನಾದ ಮದನನನ್ನು ಇದಿರಿನಲ್ಲಿ ಕಂಡು, ಭೀಮಭಯಂಕರವಾದ ತನ್ನ ಹಣೆಗಣ್ಣಿನ ವಿಕಟದೃಷ್ಟಿಯಿಂದ, ಅವನನ್ನು ದಗ್ಧನನ್ನಾಗಿ ಮಾಡಿದಂತೆ,—ಎಲಾ ಮೂಢನೆ, ಇಂದು ಕ್ರುದ್ಧನಾದ ಕೌಶಿಕನೂ ತನ್ನ ನೇತ್ರಾನಲದಿಂದ ನಿನ್ನನ್ನೂ ಹಾಗೆಯೆ ಭಸ್ಮಗೈವನು," ಎಂದು ಹರಿಶ್ಚಂದ್ರನನ್ನು ಚುರಚುರನೆ ನೋಡುತ್ತ ಆರ್ಭಟಿಸಿದನು.

ಈಗ ಹರಿಶ್ಚಂದ್ರನಿಗೆ ಎಲ್ಲವೂ ತಿಳಿದಿತು. ಮಾಡುವುದೇನು? ಅವನ ಸರ್ವನಾಶವನ್ನೂ ಅವನೇ ಒದಗಿಸಿಕೊಂಡಿದ್ದನಷ್ಟೆ! ವಿಶ್ವಾಮಿತ್ರನ ಕೋಪವೆಂದರೆ, ಅದೇನನ್ನು ಮಾಡಬಲ್ಲುದೆಂದು ದಿಟವಾಗಿ ಯಾರು ತಾನೆ ನೆಟ್ಟಗೆ ಹೇಳಲಾಪರು?

'ನನ್ನ ಸಾಧನೆಗಳಿಗೆ ವ್ಯಾಘಾತವನ್ನುಂಟುಮಾಡಿರುವ ನಿನ್ನನ್ನು ಶಪಿಸುವೆನೆಂದು ನನ್ನ ಬಲಗೈಯು ಕಂಪಿಸುತಲೇಳುತಿದೆ; ಮತ್ತೆ ಅನೇಕ ಕಾಲದಿಂದ ನಾನು ತ್ಯಜಿಸಿದ ಕ್ಷತ್ರಿಯ ಜಾತಿತ್ವವನ್ನು ಸ್ಮರಣೆಮಾಡುತ್ತ ನನ್ನ ಎಡಗೈಯು ಧನುಸ್ಸನ್ನು ಹಿಡಿಯಲು ತವಕಗೊಳ್ಳುತಲಿದೆ'— ಇಂತೆಂದು ವಿಶ್ವಾಮಿತ್ರನು ತನ್ನ ಆಸನವನ್ನು ಬಿಟ್ಟು ತಟ್ಟನೆ ಎದ್ದು ನಿಂತನು.

ಹರಿಶ್ಚಂದ್ರನು ವಿಶ್ವಾಮಿತ್ರನ ಪದತಲದಲ್ಲಿ ಹೊರಳಾಡುತ್ತಾ,— 'ಭಗವಾನ್! ಕ್ಷಮೆಯಿರಲಿ, ಕ್ಷಮೆಯಿರಲಿ! ಸ್ತ್ರೀಯರ ಆರ್ತಾಲಾಪವನ್ನು ಕೇಳಿ ಮೋಸಗೊಂಡು, ತಿಳಿಯದೆ ಗೆಯ್ದ ನನ್ನ ಅಪರಾಧವನ್ನು ಕ್ಷಮಾದೃಷ್ಟಿಯಿಂದ ಕಾಣಬೇಕು!' ಎಂದು ಗೋಳಿಟ್ಟನು.

ವಿಶ್ವಾಮಿತ್ರನ ಸಿಟ್ಟು ಇದರಿಂದ ಪುಟಕ್ಕಿಟ್ಟಂತಾಯಿತು. ನೀನು ತಿಳಿಯದೆ ಮಾಡಿದೆಯೆಂದು ನನಗುಂಟಾದ ತಪೋವಿಘ್ನವನ್ನು ನಾನು ಕ್ಷಮಿಸಬೇಕೇನಯ್ಯ,—ದುರಾತ್ಮನೆ? ನಾನ್ಯಾರೆಂದು ನೀನು ತಿಳಿದಿರುವೆ? ಸ್ವಶಕ್ತಿಯಿಂದ ಬ್ರಾಹ್ಮಣತ್ವವನ್ನು ಸಂಪಾದಿಸಿಕೊಂಡು ಅದ್ವಿತೀಯನಾದ ತೇಜೋಮಯನಾದ ವಿಪ್ರನು ಯಾವನಾಗಿರುವನೊ, ಗರ್ವಿಷ್ಠರಾದ ವಸಿಷ್ಠಪುತ್ರರಿಗೆ ಕಾನನ ಧೂಮಕೇತುವಿನಂತೆ ಯಾವನು ತೋರುತಲಿರುವನೊ; ಸ್ವರ್ಗಾಂತರ ಸೃಷ್ಟಿಕಾಲದಲ್ಲಿ ಜಗತ್ತು ಯಾರನ್ನು ಭೀತಿಯಿಂದ ಕೃತಾಂತಸ್ವರೂಪನೆಂದು ನೋಡಿದ್ದಿತೊ; ಚಂಡಾಲತ್ವವನ್ನು ಪಡೆದ ತ್ರಿಶಂಕುವಿನ ಯಜ್ಞದಿಂದ ಉತ್ತಮಫಲವನ್ನು ಯಾರು ಸಂಪಾದಿಸಿ ಕೊಟ್ಟನೊ,—ಅವನೇ ಕೌಶಿಕನಾಗಿರುವ ನನ್ನ ಪರಿಚಯವು ನಿನಗಿಲ್ಲವೇನು?" ಎಂದು ಅವನು ಬಿರುನುಡಿದನು.

ಹರಿಶ್ಚಂದ್ರನು,—'ಭಗವಾನನೆ, ಪ್ರಸನ್ನನಾಗು! ಕಠಿನ ಬರಗಾಲದಲ್ಲಿ ಮಾದಿಗನ ಮನೆಯಿಂದ ನಾಯಿ ಮಾಂಸವನ್ನು ದೇವತೆಗಳಿಗೆ ನೈವೇದ್ಯವನ್ನಾಗಿ ಆಹುತಿಯಿತ್ತು, ಮಳೆಯನ್ನು ಯಾವನು ಸುರಿಸುವಂತೆ ಮಾಡಿದನೊ; ಎಂತಹ ರಾಜನಿಂದಲಾದರೂ ಯಾವನು ಎಂದೂ ಎಂತಹ ದಾನವನ್ನೂ ಸ್ವೀಕರಿಸಿಕೊಂಡಿಲ್ಲವೊ; ಯಾವನು ಅಂತರಾಲದಲ್ಲಿ ಮಾಡಿದ ಯುದ್ಧದಿಂದ ಪ್ರಪಂಚವು ಕಂಪಿತವಾಗಿದ್ದಿತೊ; ಅಂತಹ ತಪಃ ತೇಜೋನಿಧಿಯಾಗಿರುವ ಕೌಶಿಕನನ್ನು ತಿಳಿಯದವನಾರು? ಆದರೆ, ಅಬಲೆಯರ

ಆರ್ತಸ್ವರವನ್ನು ಕೇಳಿ ನಾನಿಂತುಗೆಯ್ದೆನು. ಸ್ವಧರ್ಮವನ್ನು ಪಾಲನೆ ಮಾಡಲೆಳಸಿ ಉತ್ಸಾಹಗೊಂಡು ನಾನು ನಿಮ್ಮನ್ನು ಗೊತ್ತು ಹಚ್ಚಲಾರದೆ ಹೋದೆನು. ಅದು ಕಾರಣ ನಾನು ಕ್ಷಮಾಪಾತ್ರನು!' ಎಂದು ದೈನ್ಯ ದಿಂದ ಬಿನ್ನವಿಸಿಕೊಂಡನು.

'ದುರಾತ್ಮನಾದ ನೀನು 'ಸ್ವಧರ್ಮ'ವೆನ್ನುವುದು ಅದಾವುದು?'

'ದಾನವನ್ನು ಕೊಡುವುದೂ, ಕಾಪಾಡುವುದು, ಯುದ್ಧವನ್ನು ಮಾಡು ವುದು,-ಇವನ್ನೆ ಪ್ರಾಚೀನಮುನಿಗಳು ಕ್ಷತ್ರಿಯರಿಗೆ ಸನಾತನವಾದ ಧರ್ಮ ಗಳೆಂದು ಶ್ಲಾಘನೆಮಾಡಿರುವರು' ಎಂದು ರಾಜನು ಉತ್ತರವಿತ್ತನು.

ವಿ: 'ಹಾಗಿದ್ದರೆ,—ಯಾರಿಗೆ ಧರ್ಮವನ್ನೀಡುವೆ, ಯಾರನ್ನು ಕಾಪಾ ಡುವೆ, ಮತ್ತಾರೊಡನೆ ಕಾದಾಡುವೆ?;

ಹ: 'ಗುಣವಂತನಾದ ದ್ವಿಜನಿಗೆ ದಾನವನ್ನು ಕೊಡಬೇಕು; ಭಯಾ ರ್ತನನ್ನು ಕಾಪಾಡಬೇಕು; ಆರಾತಿಯೊಡನೆ ಯುದ್ಧಮಾಡಬೇಕು.'

ವಿ: 'ಹಾಗೇ ಆಗಲಿ. ಎಲೆ ಮಹಾತ್ಮನೆ, ನನ್ನ ಯಜ್ಞವನ್ನು ಭಂಗ ಪಡಿಸಿದುದಕ್ಕಾಗಿ ಸರಿಯಾದ ಯಾವ ದಾನವನ್ನು ಕೊಡುವೆ? ಕೊಡು!'

ಹರಿಶ್ಚಂದ್ರನಿಗೆ ಉಲ್ಲಾಸವುಂಟಾಯಿತು. 'ಮಹಾತ್ಮರು ಹಾಗಾದರೆ ವೈವಸ್ವತನ ವಂಶವನ್ನೇ ಅನುಗ್ರಹಿಸಿದಂತಾಯಿತು.! ಇಡೀ ಭೂಮಂಡಲ ವನ್ನೆ ದಾನವಾಗಿ ಕೊಟ್ಟರೂ ತಮಗೆ ಉಪಯುಕ್ತವಾಗಿ ದಾನಕೊಟ್ಟಂತೆ ಆಗಲಾರದು.'

'ಸರ್ವಸ್ವವನ್ನೂ ದಾನವಾಗಿ ಕೊಡುವೆನೆಂದು ಬಗೆದರೂ, ಪೂಜ್ಯರಿಗೆ ಯೋಗ್ಯವಾದ ದಾನವು ಅಷ್ಟರಲ್ಲೆ ಮುಗಿಯದೆಂದು ನಾನು ನಾಚಿಕೊಂಡಿರು ವೆನು. ಕುಶಿಕನಂದನ,—ಸರ್ವಧನದಿಂದ ಪರಿಪೂರ್ಣವಾಗಿ ನನ್ನ ಶಾಸನ ಕ್ಕೊಳಗಾಗಿರುವ ಈ ವಸುಂಧರೆಯನ್ನೇ ತಪೋಧನರಿಗೆ ದಾನವಾಗಿ,— ಇದೊ,—ಅರ್ಪಿಸಿರುವೆನು.' ಎಂದು ಸಂತಸಗೊಂಡು ಖಂಡಿತವಾಗಿ ನುಡಿದನು.

'ಸ್ವಸ್ತಿ! ಆದರೆ, ದಕ್ಷಿಣಾವಿಹೀನವಾದ ದಾನವು ದಾನವೇ ಅಲ್ಲ ವೆಂದು ಪಂಡಿತರೆನ್ನುವರು. ಅದುಕಾರಣ, ಇಂತಹ ದಾನಕ್ಕೆ ಯೋಗ್ಯವಾದ ದಕ್ಷಿಣೆಯನ್ನೂ ನೀನು ಕೊಟ್ಟುಬಿಡುವುದು ಉಚಿತವಾಗಿದೆ' ಎಂದು ವಿಶ್ವಾ ಮಿತ್ರನು ಸೂಚಿಸಲು; ಸರ್ವಸ್ವವನ್ನೂ ದಾನವಾಗಿತ್ತಬಳಿಕ ದಕ್ಷಿಣೆಗಾಗಿ

ತಾನೆ ಬೇರೆ ಧನವೆಲ್ಲಿಯದಿದೆ,—' ಎಂದು ರಾಜನು ಭಾವಿಸಿ ಕೊನೆಗೆ,—
'ಒಂದು ಲಕ್ಷ ಸುವರ್ಣವನ್ನು ಕೂಡಿಸಿ ದಕ್ಷಿಣೆ ಕೊಡುವೆನು. ದಯೆಯಿಟ್ಟು
ಒಂದು ತಿಂಗಳು ಕಾಲ ಅವಕಾಶ ಕೊಡುವುದು' ಎಂದು ನುಡಿದನು.

'ಉತ್ತಮವಾಯಿತು. ಇನ್ನೊಂದು ಮಾಸದ ಅವಧಿಯನ್ನು ಕೊಡು
ವೆನು. ಪರಂತು, ನನ್ನೀ ವಸುಂಧರೆಯನ್ನೀದು ಬಿಕ್ಕ ಪತ್ರಗಳಿಂದಲಾ
ದರೂ ಈ ಹಣವನ್ನು ಸಂಗ್ರಹಿಸಬೇಕು!' ಎಂದು ವಿಶ್ವಾಮಿತ್ರನ ಅನುಜ್ಞೆ
ಯಾಯಿತು.

ಇದೂ ಒಂದು ಪ್ರಮಾದವಹುದು. ಈಗ ತಾನೆ ಉಪಾಯವೇನು?
ಇದ್ದೇ ಇದೆ. ಶಿವನ ಆಶ್ರಯದಲ್ಲಿ ಇರುವ ವಾರಾಣಸಿಯು ಈ ಭೂಮಿಗೆ
ಹೊರಗಾಗಿಯೇ ಇದೆ. ಮುನಿಗಳು ಇದನ್ನು ಅಂತರಿಕ್ಷನಗರಿಯೆನ್ನುವರು.
ಶಾಸ್ತ್ರದರ್ಶಿಯರು, ವಿಶ್ವಾಸದಿಂದ, ಇದೇ ವಾರಾಣಸಿಯು ಕೂದಲ
ತುದಿಗೂ ಸಾವಿರಾರು ಪಾಲಿಗೆ ಸೂಕ್ಷ್ಮವಾದ ಅಂತರಿಕ್ಷದಲ್ಲಿ ಭೂಮಂಡಲ
ವನ್ನು ತಟ್ಟದೆ ಇದೆಯೆಂದು ನಿರ್ಧಾರವಾಡಿರುವರು. ಅಲ್ಲಿಂದ ದಕ್ಷಿಣೆಯ
ಸುವರ್ಣವನ್ನು ರಾಜನು ಕೂಡಿಸಿಕೊಳ್ಳಬಹುದಷ್ಟೆ! ಇನ್ನಿದು ಹೀಗೆಂದು
ನಿಶ್ಚಯಿಸಕೊಂಡು, ತರುವಾಯ, ಹರಿಶ್ಚಂದ್ರನು ತನ್ನ ಅಂಗದ ಆಭರಣ
ಗಳನ್ನೂ ಕೈಯಲ್ಲಿದ್ದ ಅಸ್ತ್ರಗಳನ್ನೂ, ಕೂಡಲೆ ವಿಶ್ವಾಮಿತ್ರನ ಕಾಲುಬುಡ
ದಲ್ಲಿ ಸಮರ್ಪಿಸಿ,–'ಅಹಹ! ಮುನಿಯು ಯಾವ ಕ್ರೋಧವು ಇಷ್ಟು ಕಾಲ
ವಜ್ರದಂತೆ ಭೀಷಣವಾಗಿ ನನ್ನ ಮನಸ್ಸಿಗೆ ತೋರುತಿದ್ದಿತೊ, ಅದೇ ಈಗ
ಹೂಮಳೆಯಂತಾಗಿ ನನ್ನ ತಲೆಯ ಮೇಲೆ ಸುರಿದಿತು! ಇಷ್ಟು ಕಾಲ ಬಹು
ಪರಿಶ್ರಮದಿಂದ ನಾನು ವಹಿಸಿಕೊಂಡಿದ್ದ ರಾಜ್ಯಭಾರವು ಇಂದಿಗೆ ಸಫಲ
ವಾಯಿತು!— ಭಗವತಿಯಾದ ವಸುಂಧರೆಯೆ! ಲೋಕಧಾತ್ರಿಯಾದ
ದೇವಿಯೆ! ವೈವಸ್ವತಕುಲದ ಅರಸರ ಗೌರವದಂತೆ ನಿನ್ನನ್ನು ಇಷ್ಟು ಕಾಲ
ಕಾಪಾಡಿಕೊಂಡಿದ್ದೆನು. ಇಂದು ಅತಿ ದುರ್ಲಭನಾದ ದಾನಕ್ಕೆ ಯೋಗ್ಯ
ನಾದ ಈ ಪಾತ್ರನು ದೊರೆತ ಕಾರಣ ನಿನ್ನನ್ನು ದಾನವಾಗಿ ಕೊಟ್ಟ ನನ್ನ
ಇದೊಂದು ಅಪರಾಧವನ್ನು ನೀನು ಕ್ಷಮೆಮಾಡುವುದನ್ನು!' ಎಂದು ಭೂಮಿ
ಯನ್ನೂ ವಿಶ್ವಾಮಿತ್ರನನ್ನೂ ವಂದಿಸಿ, ಅರಸನು ಅಲ್ಲಿಂದ ತೆರಳಿದನು.

ವಿಶ್ವಾಮಿತ್ರನಾದರೊ,—'ನೋಡಿದೆಯಾ. ಈ ದುರಾತ್ಮನ
ಸ್ಥೈರ್ಯವೆಷ್ಟಿದೆಯೆಂದು! ಎಂತಹ ಮಹಾನುಭಾವತೆ! ಒಳ್ಳಿತು. ದುರಾತ್ಮನ

ನೀನು ಎಷ್ಟರ ದಾನವೀರನೆಂದು ನಾನು ನೋಡದೆ ಇರಲಾರೆನು. ಕೇವಲವಾಗಿ ರಾಜ್ಯದಿಂದ ಮಾತ್ರವೆ ಅಲ್ಲ, ನಿನ್ನನ್ನು ಸತ್ಯದಿಂದಲೂ ಭ್ರಷ್ಟನನ್ನಾಗಿ ಮಾಡದಿರೆನು. ಇದನ್ನೆಷ್ಟು ದಿನ ನಾನು ಕಾಣಲಾರೆನೊ, ಅಷ್ಟು ಕಾಲಕ್ಕೂ,—ನಿನ್ನ ದುರ್ವ್ಯವಹಾರದ ದೆಸೆಯಿಂದ ನನ್ನಲ್ಲಿ ಉರಿದು ಬೆಳಗುತ್ತಿರುವ ಈ ತೀವ್ರರೋಷಾನಲವು ಎಂದೂ ಕಿಂಚಿನ್ಮಾತ್ರವಾದರೂ ಶಾಂತವಾಗುವಂತಿಲ್ಲ'ವೆಂದು ಬಿಸುಸುಯ್ದನು.

## ಮೂರನೆ ಅಂಕ

ತನ್ನ ಪಟ್ಟದರಸಿಯಾದ ಶೈಬ್ಯೆಯನ್ನೂ ಬಾಲಕಪುತ್ರನಾದ ರೋಹಿತಾಶ್ವನನ್ನೂ ಜತೆಯಲ್ಲಿರಿಸಿಕೊಂಡು ಹರಿಶ್ಚಂದ್ರನು ಎಂದಿಗೆ ಕಾಶೀಪಟ್ಟಣವನ್ನು ಸೇರಿದನೊ ಅಂದಿಗೆ,—ವಿಶ್ವಾಮಿತ್ರನಿಗೆ ದಕ್ಷಿಣೆಯನ್ನು ಸಲ್ಲಿಸತಕ್ಕ ಮಾಸದ ಅವಧಿಯು ಪೂರ್ಣವಾಯಿತು. ಅದೊಂದೇ ದಿನ ಮಾತ್ರ ಇನ್ನೂ ಉಳಿದಿದ್ದಿತು. ಅಷ್ಟೇ ಸಮಯದೊಳಗೆ ಅವನು ಒಂದುಲಕ್ಷ ಸುವರ್ಣವನ್ನು ಎಲ್ಲಿಂದ ತಾನೆ ಕೂಡಿಸಲಾಪನು? ಅದರಲ್ಲೂ ಮೊದಲಿನಂತೆ ಈಗ ಅರಸನಾಗಿಲ್ಲ; ರಾಜಪದವಿಯಲ್ಲಿ ಇದ್ದಿದ್ದರೆ ಕುಬೇರನ ಭಂಡಾರವನ್ನಾದರೂ ಜಯಿಸಿ ತರಬಹುದಾಗಿದ್ದಿತು. ಪಾಪ, ಕ್ಷತ್ರಿಯವಂಶದವನಾದುದರಿಂದ, ಬೇಡಕೂಡದು. ಮೂಲಧನವಿಲ್ಲ; ವ್ಯಾಪಾರ ಮಾಡುವುದೂ ಅಸಾಧ್ಯವು. ಯಾವುದಕ್ಕೂ ಸಮಯವೆಲ್ಲಿ? ತನ್ನನ್ನೆ ಮಾರಿಕೊಳ್ಳವೆ ಬೇಕೆಂದು ತೋಚಿತು. ಅಂತೆಯೆ ಮಾಡಲೆಳಸಿ-ದಾರಿನಡೆದು ದಣಿವಾರಿಸಿಕೊಳ್ಳುತಲಿದ್ದ ಸತೀಪುತ್ರರುಗಳನ್ನು ವಿಶ್ರಮಿಸ ಹೇಳಿ, ತಾನು ವ್ಯಾಪಾರದ ಬೀದಿಗೆ ನಡೆದು, ತನ್ನನ್ನೆ ತಾನು ಯಾರೊಬ್ಬನ ದಾಸನಾಗಿ ಮಾರಿಕೊಳ್ಳುವೆನೆಂದು ನಿರ್ಧಾರಮಾಡಿದನು.

ವಿಶ್ವಾಮಿತ್ರನೂ ಅಂದೇ ಅಲ್ಲಿಗೆ ಬಂದಿಳಿದನು. ವಿಶ್ವಾಮಿತ್ರನಿಗೆ ಹರಿಶ್ಚಂದ್ರನು ದಕ್ಷಿಣೆಕೊಡಲು ತಪ್ಪಿದರೆ, ಅವನ ಸತ್ಯವು ಭ್ರಷ್ಟವಾಗುವುದಲ್ಲದೆ, ವಿಶ್ವಾಮಿತ್ರನ ಕ್ರೋಧವೂ ಉಪಶಮನಹೊಂದುವುದು. ವಿಶ್ವಾಮಿತ್ರನು ಹರಿಶ್ಚಂದ್ರನನ್ನು ದೂರದಿಂದ ಕಂಡು,—'ಓಹೊ, ಈ ದುರಾತ್ಮನು-ದುರಾತ್ಮನೊ ಮಹಾತ್ಮನೊ ತಿಳಿಯದು, - ಇಲ್ಲಿ ಇರು

ವನು' ಎಂದು, ಅವನಿದ್ದಲ್ಲಿಗೆ ಹೋಗಿ, ತನ್ನ ಸುವರ್ಣವನ್ನು ಕೊಡೆಂದು ಕೇಳಿದನು. ಹರಿಶ್ಚಂದ್ರನು ಸೂರ್ಯಾಸ್ತದ ವರೆಗೆ ಅವಕಾಶವನ್ನು ಬೇಡಿ ಕೊಂಡು, ತನ್ನನ್ನು ಮಾರಿಕೊಂಡು ಹಣವನ್ನು ತಂದೊಪ್ಪಿಸುವೆ ನೆನ್ನಲು, ವಿಶ್ವಾಮಿತ್ರನು ಅದಕ್ಕೊಪ್ಪಿ, ತನ್ನ ದಾರಿಹಿಡಿದು ಹೋದನು.

ಆ ಕಾಲದಲ್ಲಿ, ದಾಸರಾದವರನ್ನು ಪ್ರತ್ಯೇಕವಾಗಿ ಗೊತ್ತುಹಚ್ಚುವ ಹಾಗೆ, ಅವರ ತಲೆಯಮೇಲೆ ಹುಲ್ಲನ್ನಿಡುವ ಪದ್ಧತಿಯುದ್ದಿತು. ಹಾಗೆಯೆ ಹರಿಶ್ಚಂದ್ರನು, ತನ್ನ ತಲೆಯ ಮೇಲೆ ತೃಣವನ್ನಿರಿಸಿಕೊಂಡು,—'ಮಹಾ ಶಯರುಗಳೆ! ಒಂದು ಲಕ್ಷ ಸುವರ್ಣವನ್ನು ಕೊಟ್ಟು ನನ್ನನ್ನು ಯಾರಾ ದರೂ ಕೊಂಡುಕೊಳ್ಳಿರಿ! ನಾನು ದಾಸನಾಗುವೆನು. ತಾವು ಅಪ್ಪಣೆ ಕೊಡಿಸುವಂತೆ, ಪ್ರತಿಮಾತನ್ನಾಡದೆ, ಕೆಲಸಮಾಡಲು ವಿಧೇಯನಾಗಿರು ವೆನು' ಎಂದು ಸಂತೆಬೀದಿಯಲ್ಲಿ ಕೂಗುತ್ತ ಮುನ್ನಡೆದನು. ಆ ಬೆಲೆಯು ಹೆಚ್ಚಾಯಿತೆಂದು ಅವನನ್ನು ಕೊಂಡುಕೊಳ್ಳಲು ಯಾರೂ ಬರಲಿಲ್ಲ.

ಇಷ್ಟರಲ್ಲಿ ಬಾಲಕನಾದ ರೋಹಿತಾಶ್ವನನ್ನು ಕಯ್ಹಿಡಿದು. ಶೈಬ್ಯೆಯು ಅಲ್ಲಿಗೆ ಬಂದು, ಅರಸನು ಮಾಡುತಿದ್ದ ಕಾರ್ಯವನ್ನು ಅರಿತುಕೊಂಡವ ಳಾಗಿ,—'ಅಯ್ಯೊ ಆರ್ಯಪುತ್ರನೆ, ಈಗ ತಾನೆ ನೀನೇತಕ್ಕೆ ಸ್ವಾರ್ಥ ಪರನಾಗುವೆ? ಇಷ್ಟುಕಾಲ ನಿನ್ನ ಸೌಖ್ಯದಲ್ಲಿ ನನಗೊಂದು ಪಾಲನ್ನು ಒದಗಿಸಿಕೊಟ್ಟದ್ದು, ಅಭಾಗಿನಿಯಾದ ನನಗೆ, ಈಗ ನಿನ್ನ ದುಃಖದಲ್ಲಿ ಒಂದು ಪಾಲನ್ನು ಕೊಡಲಾಗದೆ? ನನಗೂ, ಈ ವ್ಯಾಪಾರದ ಬೀದಿಯಲ್ಲಿ ನನ್ನನ್ನು ಮಾರಿಕೊಳ್ಳಲು ಅಪ್ಪಣೆಯಾಗಲಿ!'—ಎಂದೂ: ಬೀದಿಯಲ್ಲಿರುವ ಜನಗಳನ್ನು ಕರೆಯುತ್ತ, 'ಮಹಾಶಯರುಗಳಿರ! ನನ್ನ ಬೆಲೆ ಹೇಳಿರಿ! ಇವರು ಯಾವ ಬೆಲೆಯನ್ನು ಹೇಳಿದರೊ ಅದರ ಅರ್ಧಕ್ಕೆ ನನ್ನನ್ನು ದಾಸಿಯಾಗಿ ಪಡೆಯಬಹುದಾಗಿದೆ!' ಎಂದು ಕೂಗಿ ಹೇಳುತಿದ್ದಳು.

ಬಾಲಕನಾದ ರೋಹಿತಾಶ್ವನೂ, ತಾಯಿಯ ಮಾತನ್ನು ತಿಳಿದವನಾಗಿ, 'ನನ್ನನ್ನೂ ಅವರಂತೆ ಕ್ರಯಕ್ಕೆ ಪಡೆಯಿರಿ!' ಎಂದು ತಾನೂ ಹೇಳಿಕೊಂಡನು.

ರಾಜೇಶ್ವರನಾಗಿದ್ದ ತಾನು ಇಂದು ದಾಸನಾಗಿ ಮಾರಿಕೊಳ್ಳವೆ ನೆಂದು ಹರಿಶ್ಚಂದ್ರನಲ್ಲಿ ದುಃಖವೇನೂ ಉಂಟಾಗಲಿಲ್ಲ. ತನ್ನ ಪ್ರೇಮಪಾತ್ರ ಳಾಗಿದ್ದ ಪಟ್ಟದರಸಿಯಾಗಿದ್ದ ಶೈಬ್ಯೆಯೂ, ಪ್ರಾಣಕ್ಕೂ ಮಿಗಿಲಾದ ಸ್ನೇಹದ

ಪುತ್ರನೂ, ತನ್ನೊಬ್ಬನ ಸತ್ಯರಕ್ಷಣೆಗಾಗಿ, ಪುಣ್ಯವೀಥಿಯಲ್ಲಿ ದಾಸತ್ವವನ್ನು ಗ್ರಹಿಸಿಕೊಳ್ಳುವಂತೆ ಎಲ್ಲರನ್ನೂ ಪ್ರಾರ್ಥನೆ ಮಾಡಿಕೊಳ್ಳುತಿರುವರೆಂದೇ ರಾಜನಿಗೆ ವ್ಯಥೆ. ಅವನ ಹೃದಯವು ಆದೇನು ವಜ್ರದ ಸತ್ವದಿಂದ ರಚಿತ ವಾಗಿದ್ದಿತೊ ತಿಳಿಯೆವು,—ಇಲ್ಲದಿದ್ದರೆ ಅದು ಸೀಳಿಯೆಹೋಗುತಿದ್ದಿತು!

ಅಷ್ಟರಲ್ಲಿ, ವೃದ್ಧನಾಗಿದ್ದ ಒಬ್ಬ ಉಪಾಧ್ಯಾಯನು ತನ್ನ ಶಿಷ್ಯ ನೊಡನೆ, ಆ ಬೀದಿಯಲ್ಲಿ ಬರುತಿದ್ದು, ತನಗೆ ಬೇಕಾಗಿದ್ದ ಒಬ್ಬ ದಾಸಿ ಯನ್ನು ಕ್ರಯಕ್ಕೆ ಕೊಳ್ಳುವೆನೆಂದು ಅಲ್ಲಲ್ಲಿ ಹುಡುಕುತಿದ್ದನು. ಶೈಬ್ಯೆಯು, 'ಮಹಾಶಯರಲ್ಲಿ ಯಾರೇ ಆದರೂ ನನ್ನನ್ನು ಬೆಲೆಗೆ ಪಡೆಯಿರಿ!' ಎನ್ನಲು, ರೋಹಿತಾಶ್ವನು ಪ್ರತಿಧ್ವನಿಯಂತೆ, 'ನನ್ನನ್ನೂ' ಎಂದು ಕೂಗಿ ಹೇಳಿದನು.

ಉಪಾಧ್ಯಾಯನು ಈ ಮಾತುಗಳನ್ನು ಕೇಳುತಿದ್ದವನಾಗಿ,-'ಇರಲಿ, ನೀವು ಯಾವ ನಿಯಮದ ಪ್ರಕಾರ ಕೆಲಸಮಾಡತಕ್ಕವರು?' ಎಂದು ಕೇಳಲು; ಶೈಬ್ಯೆಯು,—'ಪರಪುರುಷನನ್ನು ಎಣಿಸಲಾರೆನು; ಪರರ ಎಂಜಲನ್ನು ಉಣ್ಣಲಾರೆನು. ಇದನ್ನುಳಿದು ಮಿಕ್ಕ ಯಾವ ಕೆಲಸವನಾ ದರೂ ಮಾಡುವೆನು' ಎಂದಳು. ರೋಹಿತನು ತಾನೂ ಹಾಗೆಯೆ ಮಾಡುವೆನು ಎಂದನು.

ಉಪಾಧ್ಯಾಯನು ಈ ನಿಯಮಗಳು ಸರಿಯಾದುವೆಂದು ಒಪ್ಪಿ, ಅವೇ ನಿಯಮಗಳಿಗೆ ಅನುಸಾರವಾಗಿ, ಶೈಬ್ಯೆಯೂ ಬಾಲಕನೂ ತನ್ನಲ್ಲಿ ಇರ ಬಹುದಾಗಿ ಹೇಳಿದನು. ಆಕೆಯು; ಇದೊಂದು ಉಪಕಾರವಾಯಿತೆಂದು ವಂದಿಸಿದಳು.

ಶೈಬ್ಯೆಯನ್ನು ಕಂಡು ಆ ಬ್ರಾಹ್ಮಣನು, 'ಅಹಹ! ಯಾರಿಗೆ ಇಂತಹ ಸುಲಕ್ಷಣಯುಕ್ತವಾದ ಆಕೃತಿಯಿರುವುದೊ, ಯಾರ ಪ್ರಕೃತಿಯು ಈ ರೀತಿಯಲ್ಲಿ ಸುಂದರವೂ ವಿನೀತವೂ ಆಗಿರುವುದೊ, ಅಂತಹಳಿಗೆ ಈ ದುರವಸ್ಥೆಯು ಹೇಗೆ ತಾನೆ ಪ್ರಾಪ್ತವಾಯಿತೆಂದು ಭಾವಿಸುತ್ತ,-'ಅಮ್ಮಾ, ನಿನ್ನ ಪತಿಯು ಇನ್ನೂ ಜೀವಿತನಾಗಿರುವನೆ?' ಎಂದು ಕೇಳಿದನು.

ಶೈಬ್ಯೆಯು, ತಲೆವಾಗಿ, ಸ್ವಾಮಿಯು ಜೀವಿತನಾಗಿರುನೆಂದು ಉತ್ತರಕೊಟ್ಟಳು.

ಹರಿಶ್ಚಂದ್ರನು ಅಲ್ಲೇ ಇದ್ದನಷ್ಟೆ. ನೀರ್ತುಂಬಿದ ಕಣ್ಣುಗಳಿಂದ, ನಿಟ್ಟುಸಿರಿಂದ, ಅವನು, 'ಇನ್ನೂ ಜೀವಿತನಾಗಿರುವನೆಂಬುದೆಲ್ಲಿ? ಪತಿ

ಜೀವಿತನಾಗಿರುವಾಗ ಪತ್ನಿಯ ದಶೆಯು ಹೀಗಾಗುವುದೆಂದೂ ಇದೆಯೆ
ಎಂದನು.

ಉಪಾಧ್ಯಾಯನು, 'ಪತಿಯು ಸಮೀಪದಲ್ಲಿರುವವನೇ?' ಎನ್ನಲು
ಶೈಬ್ಯೆಯು ಉತ್ತರ ಕೊಡದೆ, ತನ್ನ ಪತಿಯನ್ನು ದಿಟ್ಟಿಸಿ ನಿಂತಳು. ಆಗ
ಉಪಾಧ್ಯಾಯನು ಈ ಇಂಗಿತವನ್ನರಿತು,-- 'ಆಹ! ಇವರೂ ಅತಿ
ಸುಲಕ್ಷಣಗಳನ್ನುಳ್ಳ ಪುರುಷರು. ವೃಷಸ್ಕಂಧರೂ, ಆನೆಯ ಸೊಂಡಿಲನ್ನು
ಹೋಲುವ ಆಯತವಾದ ಭುಜಗಳನ್ನುಳ್ಳವರೂ, ವಿಶಾಲವಾದ ಎದೆ
ಯನ್ನುಳ್ಳವರೂ, ಆಗಿರುವ ಇವರು ಭೂಮಿಯನ್ನು ರಕ್ಷಣೆ ಮಾಡಲು
ಸಾಮರ್ಥ್ಯವಂತರು. ಚೂಡಾಮಣಿಯು ಯಾವ ಮಸ್ತಕವನ್ನು ಅಲಂಕರಿ
ಸಬೇಕಾಗಿದ್ದಿತೊ, ಅದನ್ನು ಇವರು ಹುಲ್ಲಿನಿಂದ ಅಲಂಕರಿಸಿ ಇರುವರು.
ವಿಧಿಯು ಪ್ರತಿಕೂಲವಾಗಿದ್ದರೆ ಯಾರನ್ನು ತಾನೆ ನಿಷ್ಠುರವಾಗಿ ಬಡೆಯ
ದಿರುವನು?' ಎಂದು ತನ್ನೊಳಗೆ ಭಾವಿಸಿಕೊಂಡು, 'ಮಹಾತ್ಮರೆ, ತಮ್ಮ
ದುಃಖದಲ್ಲಿ ನನಗೂ ಒಂದು ಪಾಲನ್ನು ದಾನ ಮಾಡಿರಿ. ಇಂತಹ ಕೆಲಸಕ್ಕೆ
ತಾವು ಕೈಹಚ್ಚಿದಿರೇಕೆ?" ಎಂದು ರಾಜನನ್ನು ಕೇಳಿದನು.

ರಾಜನು:—ಬ್ರಾಹ್ಮಣನ ಋಣದಿಂದ ಪೀಡಿತನಾದ ನಾನು ಹೀಗೆ
ವರ್ತಿಸಬೇಕಾದುದು.

ಉಪಾಧ್ಯಾಯನು:—ಹಾಗಾದರೆ ನಾನಷ್ಟು ಹಣವನ್ನು ಇದೊ ನಿನಗೆ
ಕೊಡುವೆನು. ದಾಸಿಯನ್ನು ನಾನು ಈಗ ಕೊಂಡುಕೊಳ್ಳುವುದಿಲ್ಲ.

ರಾಜನು:—ಎಲೆ ಸಾಧುವೆ,—ಬ್ರಾಹ್ಮಣರ ವೃತ್ತಿಯು ನನ್ನಂತಹ
ಪುರುಷರಿಗೆ ಶೋಭಿಸದು. ನನ್ನನ್ನು ತಮ್ಮ ದಯೆಗೆ ಯೋಗ್ಯನೆಂದು
ಎಣಿಸುವಿರಾದರೆ, ನನ್ನ ಬೆಲೆಯೆಂದು ತಾವು ಈ ಹಣವನ್ನು ನನಗೆ
ಕೊಡಬಹುದು.

ಶೈಬ್ಯೆಗೆ ಇದರಿಂದ ಭಯವುಂಟಾಯಿತು. ಅವಳು ಕೈಜೋಡಿಸಿ
ಕೊಂಡು, 'ಮಹಾಶಯರೆ! ಮೊದಲು ನಾನಲ್ಲವೆ ತಮ್ಮ ಬಳಿಗೆ ಬಂ
ದ್ದೆನು?—ನನ್ನನ್ನು ತ್ಯಜಿಸಿ ತಾವು ಮತ್ತೊಬ್ಬರನ್ನು ಪಡೆವುದು ತಮಗೆ
ಉಚಿತವಾಗಲಾರದು. ದಯೆಮಾಡಿ; ನಾನು ತಮಗೆ ಶರಣಾಗತಳಾಗಿ
ವೆನು' ಎಂದಳು.

ಬ್ರಾಹ್ಮಣನ ಕಣ್ಣುಗಳಲ್ಲಿ ನೀರು ಉಕ್ಕಿಬಂತು. 'ನನ್ನೊಡನೆ ಇವೇ ಅರ್ಧಲಕ್ಷ ವರಹಗಳಿವೆ. ಅವನ್ನು ನಿಮ್ಮ ಬಳಿಯಲ್ಲಿ ಕೊಡುವೆನು. ನಿಮಗೆ ಯಾವುದು ಉಚಿತವೊ ಹಾಗೆ ಮಾಡಬಹುದು' ಎಂದು ಆ ಹಣವನ್ನು ಅಲ್ಲಿ ಇರಿಸಿ, ತಾನು ತಟಸ್ಥನಾದನು.

ಅದನ್ನು ತ್ವರೆಯಿಂದ ಸ್ವೀಕರಿಸಿಕೊಂಡು, ಶೈಬ್ಯೆಯು ಆರ್ಯಪುತ್ರನ ಋಣದಲ್ಲಿ ಅರ್ಧಪಾಲನ್ನು ಒದಗಿಸಿ ಕೊಡುವ ಪುಣ್ಯವು ತನಗೆ ಉಂಟಾಯಿತೆಂದು ಸಂತಸಗೊಂಡಳು. ಈ ನೋಟವನ್ನು ಕಂಡು ಬ್ರಾಹ್ಮಣನು ಅಲ್ಲಿ ನಿಲ್ಲಲಾರದೆ, ಶಿಷ್ಯನನ್ನು ಮಾತ್ರ ಅಲ್ಲಿ ಇರಿಸಿ, ತಾನು ತೆರಳಿದನು. ಆಗ ಶೈಬ್ಯೆಯು, 'ಆರ್ಯಪುತ್ರನೆ, ಈ ಬ್ರಾಹ್ಮಣನ ದಾಸಿಯಾಗಲು ನನಗೆ ಅಪ್ಪಣೆಪಾಲಿಸಬೇಕು' ಎಂದು ರಾಜನನ್ನು ಬೇಡಿಕೊಂಡಳು.

ರಾಜನು:—'ಪ್ರಬಲನಾದ ವಿಧಿಯೇ ಅನುಮತಿಯನ್ನು ಕೊಟ್ಟಿರುವನೆಂದ ಬಳಿಕ, ನಾನು ಅಪ್ಪಣೆಕೊಡುವುದೇನು?' ಎನ್ನಲು, ಶೈಬ್ಯೆಯು ಹಿಂದಿರುಗಿ ನೋಡುತ್ತ, ನೋಡುತ್ತ, ರೋಹಿತಾಶ್ವನನ್ನು ಎತ್ತಿಕೊಂಡು, ತಾನು ಆ ಶಿಷ್ಯನೊಡನೆ ಅಳುತಳುತ ಹೊರಟು ಹೋದಳು.

ಅಷ್ಟರಲ್ಲಿ ವಿಶ್ವಾಮಿತ್ರನು ಅಲ್ಲಿಗೆ ಬಂದು, ರಾಜನು ಕೂಡಲೆ ತನ್ನ ಹಣವನ್ನು ಕೊಡಲೇಬೇಕೆಂದು ಬಲಾತ್ಕರಿಸಿದನು.

ರಾಜನು:—ಮಹನೀಯರೆ, ಪರಿಗ್ರಹಿಸಬೇಕು. ಇದರಲ್ಲಿ ತಮಗೆ ಸಲ್ಲತಕ್ಕುದರಲ್ಲಿ ಅರ್ಧವಿದೆ.

ವಿಶ್ವಾಮಿತ್ರನು:—ಅಹ! ಅರ್ಧ!! ಅರ್ಧವನ್ನು ಹಿಡಿದು ನಾನು ಮಾಡುವುದೇನಯ್ಯ? ಪೂರ್ಣವಾಗಿ ಕೊಡಲಾರೆಯಾದರೆ ಹಾಗೆ ಹೇಳಲಾರದೆ? ಎಲ್ಲವನ್ನು ಈಗಲೆ ಕೊಡಬೇಕು!

ಇಷ್ಟರಲ್ಲಿ, 'ಬ್ರಾಹ್ಮಣಾ! ನಿನ್ನ ತಪಸ್ಸಿಗೂ ವ್ರತಕ್ಕೂ ಧಿಕ್ಕಾರವಿರಲಿ! ನಿನ್ನ ಜ್ಞಾನಪಾಂಡಿತ್ಯಗಳಿಗೆ ಧಿಕ್ಕಾರವಿರಲಿ!! ಹರಿಶ್ಚಂದ್ರನ ದಸೆಯನ್ನು ಹೀಗೆ ಮಾಡಿದ ನಿನಗೆ ಧಿಕ್ಕಾರವಿರಲಿ!!!' ಎಂದು ಅಶರೀರವಾಕ್ಯ ಕೇಳಿಸಿತು.

ವಿಶ್ವಾಮಿತ್ರನು ಆಕಾಶವನ್ನು ನೋಡಿ,—ವಿಶ್ವದೇವತೆಗಳು ತನ್ನನ್ನು ಧಿಕ್ಕರಿಸುವುದನ್ನು ತಿಳಿದವನಾಗಿ, ಕ್ರೋಧದಿಂದ,—'ಓಹೋ, ನೀವು ವಿಶ್ವದೇವತೆಗಳೊ? ಆತ್ಮಜ್ಞಾನವಿಲ್ಲದೆ ಕ್ಷತ್ರಿಯಪಕ್ಷಪಾತಿಗಳಾಗಿರುವ

ಕ್ಷುದ್ರರೆ! ನಿಮಗೆ ಧಿಕ್ಕಾರವಿರಲಿ! ಕ್ಷತ್ರಿಯ ಕುಲದಲ್ಲಿ ನೀವು ಜನ್ಮ ಪಡೆಯಿರಿ! ಬ್ರಾಹ್ಮಣನಾದ ದ್ರೋಣಾಚಾರ್ಯನ ಪುತ್ರನು ನಿಮ್ಮ ಪುತ್ರರನ್ನು ಕೊಲ್ಲಲ್ಲಿ!' ಎಂದು ಗರ್ಜಿಸಿ ಶಪಿಸಿದನು. ಇದನ್ನು ಕೇಳಿದ ವಿಶ್ವದೇವತೆಗಳು ಆಕಾಶಪಥದಲ್ಲಿ ಪಲಾಯನ ಮಾಡಿದರು.

ವಿಶ್ವಾಮಿತ್ರನ ತಪಃಪ್ರಭಾವವನ್ನು ಕಂಡು ಹರಿಶ್ಚಂದ್ರನು ಕಂಬಗಟ್ಟಿದನು. ಇಂತಹ ತಪಸ್ಸನ್ನು ಸ್ವಾಧೀನಪಡಿಸಿಕೊಂಡ ಮನುಷ್ಯನ ಕೋಪದಿಂದ ಹರಿಶ್ಚಂದ್ರನಂತಹ ಸಾಮಾನ್ಯನು ದುಃಖಕ್ಕೆ ಒಳಗಾಗುವುದರಲ್ಲಿ ಆಶ್ಚರ್ಯವೇನು? ಆದುದರಿಂದ ಅವನು ವಿನಯಪುರಸ್ಸರವಾಗಿ,—'ಮಹಾತ್ಮರೇ! ನನ್ನ ಮಾತು ಎರಡಾಗದು. ಸತೀಪುತ್ರರನ್ನು ಮಾರಿ ಅರ್ಧ ಹಣವನ್ನು ಕೂಡಿಸಿದೆನು. ಉಳಿದರ್ಧವನ್ನು ನನ್ನನ್ನೆ ಮಾರಿಕೊಂಡು ತಂದುಕೊಡುವೆನು' ಎಂದನು.

ವಿಶ್ವಾಮಿತ್ರನು,—'ಎಲ್ಲವನ್ನೂ ಒಮ್ಮೆಗೇ ಕೊಡಬೇಕು. ಅರ್ಧದಿಂದ ಪ್ರಯೋಜನವಿಲ್ಲ' ಎಂದನು.

ಹರಿಶ್ಚಂದ್ರನಿಗೆ ಬೇರೆ ಉಪಾಯ ತೋಚದೆ,—"ಯಾರಪ್ಪಾ? ನನ್ನನ್ನು ಯಾರೂ ಬೆಲೆಗೆ ಕೊಳ್ಳಲಾರಿರಾ? ಅರ್ಧ ಲಕ್ಷ ಚಿನ್ನದ ಮೊಹರುಗಳನ್ನು ಕೊಟ್ಟು, ನನ್ನನ್ನು ಕೊಂಡುಕೊಳ್ಳಿರಿ!' ಎಂದು ಸಿಕ್ಕಲ್ಲಿಗೆ ಕೂಗಿ ಹೇಳುತಿದ್ದನು.

ಆಗ, ಅಸಹ್ಯವಾದ ರೂಪವುಳ್ಳ, ಹೊಲಸುವೇಶದ ಚಂಡಾಲನು, ತನ್ನ ಆಳುಗಳೊಡನೆ ಅಲ್ಲಿಗೆ ಬಂದು, 'ಆರ್ರೇ! ನಾನು ಕ್ರಯ ಕೊಟ್ಟೇನು. ಇಕ್ಕೊ, ನಿನ್ನ ಚಿನ್ನ!' ಎಂದು ರಾಜನಿಗೆ ಹೇಳಿದನು.

ಹರಿಶ್ಚಂದ್ರನು ಅವನನ್ನು ಕಂಡು, ಬೆದರಿ, ಹಿಂಜರಿದು,—'ನೀನ್ಯಾರಯ್ಯ?' ಎಂದು ಕೇಳಿದನು.

ಚಂಡಾಲನು,—'ಎಲ್ಲ ಸ್ಮಶಾನಗಳಿಗೆ ಅಧಿಪತಿಯೇ ನಾನು: ದಂಡಾಧ್ಯಕ್ಷರಾದ ರಾಜಪುರುಷರುಗಳ ವಿಶ್ವಾಸಕ್ಕೆ ಪಾತ್ರನಾಗಿರುವಾತನೇ ನಾನು; ವಧ್ಯಭೂಮಿಯಲ್ಲಿ ನಿಯುಕ್ತರಾಗಿರುವ ಚಂಡಾಲರಿಗೆ ಅಧಿಪತಿಯೇ ನಾನು!' ಎಂದು ಪರಿಚಯವನ್ನಿತ್ತನು.

ಭಯದಿಂದಲೂ ಘೃಣೆಯಿಂದಲೂ ಕಂಗೆಟ್ಟು, ಕೌಶಿಕನ ಪಾದಗಳನ್ನು ಬಿಗಿಹಿಡಿದು, ಹರಿಶ್ಚಂದ್ರನು,—'ಋಷಿಯೋತ್ತಮರೆ! ತಮ್ಮ

ದಾಸನಾಗಿದ್ದುಕೊಂಡು ನನ್ನ ಋಣವನ್ನು ತೀರಿಸುವೆನು. ಚಂಡಾಲನ ದಾಸತ್ವವನ್ನೂ ವಹಿಸಿಕೊಳ್ಳಬೇಕೆ? ಇದನ್ನು ನಾನು ಎಂದು ಕೇಳಿದುದೂ ಇಲ್ಲ; ಕಂಡುದೂ ಇಲ್ಲ!' ಎಂದು ಬೇಡಿಕೊಂಡನು.

ವಿಶ್ವಾಮಿತ್ರನು, 'ಹುಚ್ಚು! ಋಷಿಗಳಾದವರು ತಾವೇ ತಮಗೆ ದಾಸರಾಗಿರಲು. ಮತ್ತೊಬ್ಬ ದಾಸನಿಂದ ನನಗೇನು ಕೆಲಸವಾಗಬೇಕು?' ಎಂದನು.

ಹರಿಶ್ಚಂದ್ರನು,—'ಭಗವಾನರು ಆದೇಶಮಾಡುವಂತೆ ನಾನು ಮಾಡಲು ಸಿದ್ಧನಾಗಿದ್ದೇನೆ' ಎನ್ನಲು, ವಿಶ್ವದೇವತೆಗಳನ್ನು ಸಾಕ್ಷಿಯಾಗಿರಿಸಿ, ಹರಿಶ್ಚಂದ್ರನು ಆ ಚಂಡಾಲನ ದಾಸನಾಗಿ ತನ್ನನ್ನು ಮಾರಿಕೊಂಡು ಆ ಋಣವನ್ನು ತೀರಿಸಿಕೊಡಬೇಕಾಗಿ ವಿಶ್ವಾಮಿತ್ರನ ಅಪ್ಪಣೆಯಾಯಿತು. ಆಗ, ಉಪಾಯವಿಲ್ಲದೆ, ಹರಿಶ್ಚಂದ್ರನು, ಚಂಡಾಲ ಶ್ರೇಷ್ಠನನ್ನು ವಿಜ್ಞಾಪಿಸಿಕೊಂಡು—'ಹೇಳಿದಂತೆ ಕೆಲಸ ಮಾಡವೆನಾದರೂ, ನಿನ್ನ ಸ್ಪರ್ಶದಿಂದ ದೂರವಾಗಿದ್ದು, ಭಿಕ್ಷಾನ್ನದಿಂದಲೆ ತನ್ನ ಜೀವನವನ್ನು ಕಾಪಾಡಿಕೊಳ್ಳುವಂತೆ ನಿಯಮವಿದೆ' ಎಂದು ತಿಳುಹಿ, ತನ್ನನ್ನು ಲಕ್ಷಾರ್ಧ ಸುವರ್ಣಕ್ಕೆ ಮಾರಿಕೊಂಡನು. ಆ ಹಣವನ್ನು ವಿಶ್ವಾಮಿತ್ರನಡಿಯ ಲ್ಲಿಟ್ಟು,—ಇಂದಿಗೆ ತಾನು ಬ್ರಾಹ್ಮಣನ ಋಣದಿಂದ ಮುಕ್ತನಾದೆನೆಂದೂ, ಸತ್ಯಭ್ರಷ್ಟನಾಗದೆ ಇದ್ದು ಚಂಡಾಲನ ದಾಸತ್ವವನ್ನು ಸ್ವೀಕರಿಸಿದುದು ಶ್ರೇಯಸ್ಕರವಾದುದೆಂದೂ ಸಂತಸಗೊಂಡು, ಮಹರ್ಷಿಯಾದ ವಿಶ್ವಾಮಿತ್ರನಿಗೆ ಆ ಧನವನ್ನು ಅರ್ಪಿಸಿದನು!

ವಿಶ್ವಾಮಿತ್ರನು ಹೇಳುವುದೇನು? ಇವನು ಚಂಡಾಲನ ದಾಸತ್ವವನ್ನಾದರೂ ಸ್ವೀಕಾರಮಾಡಿಕೊಂಡು, ಸತ್ಯವನ್ನು ಕಾಪಾಡಿಕೊಂಡನು! ಪ್ರತಿಮಾಡದೆ ವಿಶ್ವಾಮಿತ್ರನು ಅಲ್ಲಿಂದ ಅಪೆತ್ತಲಿಗೊ ತೆರಳಿದನು.

ಹರಿಶ್ಚಂದ್ರನು, ಚಂಡಾಲನನ್ನು ಕುರಿತು, 'ಪ್ರಭುವೆ! ನನಗೆ ಈಗ ಕೆಲಸವೇನಿದೆ?' ಎಂದು ಕೇಳಿಕೊಳ್ಳಲು, ದಕ್ಷಿಣಸ್ಮಶಾನಕ್ಕೆ ತೆರಳಿ ಅಲ್ಲಿ ಶವಗಳ ಮೇಲಣ ವಸ್ತ್ರವನ್ನು ಕೂಡಿಸಬೇಕಾಗಿ ಹರಿಶ್ಚಂದ್ರನಿಗೆ ಚಂಡಾಲನ ಅಪ್ಪಣೆಯಾಯಿತು. ಅವನ ಇಬ್ಬರು ಆಳುಗಳೊಂದಿಗೆ ಹರಿಶ್ಚಂದ್ರನು ದಕ್ಷಿಣಸ್ಮಶಾನದ ಕಡೆಗೆ ತೆರಳಿದನು.

---

## ನಾಲ್ಕನೆ ಅಂಕ

ರಾಜ್ಯವೂ ಹೋಯಿತು; ಸ್ತ್ರೀಪುರುಷರೂ ಪರಗೃಹದಲ್ಲಿ ದಾಸ್ಯವನ್ನು ಅಂಗೀಕರಿಸಿಕೊಂಡರು; ತಾನು ಸ್ಮಶಾನಚಂಡಾಲನಿಗೆ ದಾಸನಾಗಿದ್ದು ಹೇಯವಾದ ಹೊಲಸು ಹೆಣಗಳ ಮೇಲಣ ವಸ್ತ್ರಗಳನ್ನು ಕೂಡಿಸುವ ಅಧಿಕಾರಿ! ಈ ದುರ್ಭಾಗ್ಯವನ್ನು ಕುರಿತು ದೂರದಲ್ಲಿ ಕಾಣುತ್ತಿದ್ದ ಸ್ಮಶಾನದ ಕಡೆಗೆ ಹೋಗುತ್ತಿದ್ದ ಹರಿಶ್ಚಂದ್ರನು ಆಲೋಚಿಸುತ್ತ,—'ದುಃಖವೇ ದುಃಖವನ್ನು ಹೋಗಲಾಡಿಸುವುದೆಂಬುವ ಗಾದೆಯು ನಿಜವಾದುದು. ಋಣದ ಚಿಂತೆಯೇ ಮಹಾ ದುಃಖವಾಗಿ ತೋರುತ್ತಿತ್ತು, ಆದರೆ ಈಗ ಅದು—ಈ ಸ್ಮಶಾನದಾಸತ್ವದ ಇದಿರಿನಲ್ಲಿ—ಮಾಯಗೊಂಡಿದೆ. ಪ್ರಿ… ರೋಹಿತಾಶ್ವರುಗಳೆ, ನಿಮ್ಮನ್ನು ಅಗಲಿರುವ ದುಃಖವೇ ನನ್ನಲ್ಲಿ ಸ್ವ… ಗಳನ್ನೂ ದೂರಕ್ಕೋಡಿಸಿದೆ' ಎಂದು ತನ್ನೊಳಗೆ ಅಂದುಕೊಂಡನು.

ಹರಿಶ್ಚಂದ್ರನು ಸ್ಮಶಾನಕ್ಕೆ ಅನುಚರರೊಡನೆ ಬಂದು ಮುಟ್ಟಿದನು. ಹದ್ದುಗಳು ಆಕಾಶದಲ್ಲಿ ಹಾರುತ್ತ ಜೊಲ್ಲನ್ನು ಸುರಿಸುವ ಕೊಕ್ಕುಗಳಿಂದ ಆಗಾಗ ಶವಗಳ ಮಾಂಸವನ್ನು ಕಿತ್ತಾಡುತ್ತಿವೆ. ನಾನಾ ಬಗೆಯ ಚೀತ್ಕಾರ ಗೋಳಾಟಗಳು ಕಿವಿಯನ್ನು ಮುತ್ತಿ ಕಿವುಡಾಗಿ ಮಾಡುತ್ತಿವೆ. ಚಿತೆಯ ಅಗ್ನಿಯು ಶವಗಳ ತಲೆಗಳನ್ನು ಒಡೆದು, ಮಿದುಳನ್ನು ಹೊರಪಡಿಸುತ್ತಿದೆ; ಪುನಃ ಆ ತೈಲಪದಾರ್ಥವನ್ನು ಸುಟ್ಟು ಉರಿದು ಪ್ರಜ್ವಲಿತವಾಗುತ್ತಿದೆ. ಕೆಲವುಕಡೆ, ಕಾಗೆಗಳು ಶವಗಳ ಕಣ್ಣುಗಳನ್ನು ಕೀಳುತ್ತಿವೆ; ನರಿಗಳು ಶವಗಳ ಬಾಯಿಯಿಂದ ನಾಲಗೆಗಳನ್ನು ಹೊರಕ್ಕೆಳೆದು ಕಡಿಯುತ್ತಿವೆ; ಹೊಟ್ಟೆಯ ಕರುಳುಗಳನ್ನು ನಾಯಿಗಳು ಕತ್ತರಿಸುತ್ತಿವೆ. ಇದನ್ನು ಕಂಡಾ ರಾಜನು,—'ಅಯ್ಯೋ ಶವಗಳೆ! ಈ ದುಷ್ಟಪ್ರಾಣಿಗಳು ನಿಮ್ಮನ್ನು ಕಡಿದಾಡುತ್ತಿವೆಯಾದರೂ ನೀವೇ ಧನ್ಯ!' ಎಂದು ಬ… ಸುಯ್ದನು. ಪುನಃ, 'ಈ ಸಾರರಹಿತವಾದ ಶರೀರವನ್ನು ನೋಡಿದರೆ ಇದೆಲ್ಲ ಧಿಕ್ಕಾರಕ್ಕೆ ಒಳಗಾಗಿರುವುದಲ್ಲವೆ? ರಕ್ತ ಮಾಂಸ ಎಲುವು ಮು… ಉಗುಳುಗಳಿಂದ ಮಯವಾದ ಇದು, ಧೀರರುಗಳಲ್ಲಿ ಭಯವನ್ನೂ, ವಿವೇಕಿ… ರಾದ ಪಂಡಿತರಲ್ಲಿ ಲಜ್ಜೆಯನ್ನೂ, ವಿಷಯಾಸಕ್ತರಾದ ಮೂರ್ಖರಲ್ಲಿ ದುರಭಿಮಾನವನ್ನೂ ಹುಟ್ಟಿಸುವುದಲ್ಲವೆ?' ಎಂದು ವಿಚಾರಮಗ್ನನಾದನು.

ಅತ್ತಲೊಂದು ದೊಡ್ಡ ಮರವಿದ್ದಿತು. ಅದರ ಪೊಟರೆಯಲ್ಲಿ ಶ್ಮಶಾನೇಶ್ವರಿಯಾದ ಕಾತ್ಯಾಯನಿಯು ನೆಲಸಿದ್ದಳೆಂದು ರಾಜನ ಅನುಚರರ ಅಭಿಪ್ರಾಯವಿದ್ದಿತು. ಅವರು ಭೀಷಣವಾದ ಮಂತ್ರಗಳನ್ನು ಉಚ್ಚರಿಸಿ, ಚಂಡಿಗೆ ಪ್ರಣಾಮಮಾಡಿದನು. ಮರದ ಬುಡದಲ್ಲಿ ಆಹುತಿಯಾಗಿ ಮಡಿದಿದ್ದ ಕೋಣಗಳ ಕೊರಳುಗಂಟೆಗಳ ಸರಗಳನ್ನು ಮರಕ್ಕೆ ತೂಗ ಹಾಕಿದ್ದರು. ಅವು ಗಾಳಿಯಲ್ಲಿ ಅಟ್ಟಹಾಸದಿಂದ ಅತ್ತಿತ್ತ ಧ್ವನಿಮಾಡು ತ್ತಿದ್ದುವು. ಕೊಂಬೆಗಳ ಮೇಲೆ, ಮಾಂಸಖಂಡಗಳಿಗಾಗಿ ಕೊಕ್ಕನ್ನು ಮಸೆದು ಸಿದ್ಧವಾಗಿ ಕುಳಿತಿದ್ದ ಕಾಗೆಗಳ ಕಾ-ಕಾರವದಿಂದ ನಾಲ್ದಿಕ್ಕುಗಳು ತುಂಬಿದ್ದುವು. ಹೀಗಾಗಿ. ಹರಿಶ್ಚಂದ್ರನ ಮನಸ್ಸೆಲ್ಲವೂ ಭೀಭತ್ಸತೆಯಿಂದ ತೊಯಿದು ಹೋಗಿದ್ದಿತು. ಸ್ಮಶಾನದಲ್ಲಿ ಅಧಿಷ್ಠಾನವನ್ನು ಹೊಂದಿದ್ದ ಕಾತ್ಯಾಯನಿಯು ನಿವಾಸವಾಗಿದ್ದ ಆ ಮರವನ್ನು ಉದ್ದೇಶಿಸಿ.-'ನಮಸ್ತೇ ಭಗವತಿ! ಚಂಡಿ! ಪ್ರೇತವಿಮಾನಪ್ರಿಯೇ! ಪ್ರೇತಾಕ್ಷಿ ರೌದ್ರರೂಪೇ! ಪ್ರೇತಾಶನಿ! ಭೈರವಿ!' ಎಂಬಿತ್ಯಾದಿಯಾಗಿ ಸ್ತೋತ್ರಮಾಡಿದನು.

ಆಗ ಸಂಧ್ಯಾಕಾಲವಾಗಿದ್ದಿತು. ಸ್ಮಶಾನವು ಮತ್ತಷ್ಟು ಭೀಕರ ವಾಗಿ,—ಕತ್ತಿಯ ಧಾರೆಯಿಂದ ವಧ್ಯಳಾದ ನಾರಿಯಂತೆಯೂ; ಮುಸುಕಿನ ಸೂರ್ಯನ ಕಿರಣಗಳು ಸ್ವಪ್ನದಲ್ಲಿ ಉರಿವ ಬೆಂಕಿಯ ಕೆಂಡದಂತೆಯೂ; ತಾರಗೆಗಳು ಮಹಾ ಸ್ಮಶಾನವಾದ ಆಕಾಶದಲ್ಲಿ ಸಿಡಿದ ಹೊಸ ಎಲುವು ತುಂಡುಗಳಂತೆಯೂ; ಚಂದ್ರನು ಒಣಗಿದ ನರಕಪಾಲ ದಂತೆಯೂ; ಹೊಗೆಯು ಕುಣಿಯುತ್ತಿರುವ ಪಿಶಾಚಗಳಂತೆಯೂ; ಜಗ ತ್ತೆಲ್ಲವೂ ಕಾಲಸ್ವರೂಪನಾದ ಕಾಪಾಲಿಕನ ಆಟದ ಸ್ಥಳದಂತೆಯೂ,— ಹರಿಶ್ಚಂದ್ರನಿಗೆ ತೋರಿಬಂದುವು.

ರಾತ್ರಿಯೂ ಹೆಚ್ಚಿತು. ವಿಕಟಾಕೃತಿಯ ಬೇತಾಳರೂ ಪಿಶಾಚರೂ ಒಬ್ಬೊಬ್ಬರಾಗಿ ಬರಲಾರಂಭವಾಯಿತು. ಚಂಡಾಲರು ಹರಿಶ್ಚಂದ್ರನನ್ನು ಅಲ್ಲೇ ಬಿಟ್ಟು, ತಾವು ಪಲಾಯನ ಮಾಡಿದರು. ಹರಿಶ್ಚಂದ್ರನಿಗೆ ಯಾವ ಭಯವೂ ಚಿಂತೆಯೂ ತಟ್ಟವು, ಭೀಭತ್ಸತೆಯ ಮಹಾ ಸಾಗರದಲ್ಲಿ ಅವನು ಮುಳುಗಿದ್ದನು. ಹಳೆಯ ಹಾಳುಬಾವಿಯಂತಹ ದೊಡ್ಡ ಕಣ್ಣು ಗಳ, ಕಿರುದಲೆಯ, ಕರಾಲವೂ ಉನ್ನತವೂ ಆದ ಮೂಗಿನ, ಕೋರೆ ದಾಡೆಗಳ, ಕ್ರೂರನೋಟದ, ಮರದ, ಪೊಟರೆಯಂತಹ ಆಳವಾದ

ಹೊಟ್ಟೆಯು, ಭೀಕರ ದೇಹದ ಪ್ರೇತಗಳು ಸಿಕ್ಕಿದಂತೆ ಓಡಾಡುತಿದ್ದುವು! ಕೆಲವು ರಕ್ತವನ್ನು ಮದ್ಯದಂತೆ ಕುಡಿವುತಿದ್ದುವು. ಒಂದು ಪ್ರೇತದ ಬಾಯಿಯಿಂದ ವಿಗಳಿತವಾಗುವ ನೆತ್ತರನ್ನು ಮತ್ತೊಂದು ಪ್ರೇತವು ನಾಲಗೆನೀಡಿ ನೆಕ್ಕುತಿದ್ದಿತು. ಒಂದು ತಟಕು ರಕ್ತವು ಮಣ್ಣಲ್ಲಿ ಬಿದ್ದಿತೆಂದರೆ, ಒಡನೆಯೆ ಕೊರಲನ್ನು ನೀಡಿ ಮತ್ತೊಂದು ಪ್ರೇತವು ಅದರ ಸವಿಯನ್ನು ಕಾಣುತಿದ್ದಿತು. ಇನ್ನೊಂದು ಪ್ರೇತವು ಉರಿವ ರುಂಡವೊಂದನ್ನೆತ್ತಿಕೊಂಡು ತಿನ್ನಲು ಬಾಯಿಯನ್ನಿಕ್ಕಿ, ಅದು ಬಿಸಿಯೆಂದರಿತೊಡನೆ, ಅದನ್ನು ಮರಳಿ ಬೆಂಕಿಯಲ್ಲಿ ಬಿಸಾಡುತಿದ್ದಿತು ಕೆಲವು ಒಂದನ್ನೊಂದು ಮುತ್ತಿಟ್ಟು ಕುಣಿಯುತಿದ್ದುವು. ಹಲ್ಕಡಿವುದಕ್ಕಂತೂ ಎಣೆಯಿಲ್ಲದು. ಪರಸ್ಪರವಾಗಿ ಅವು ಅಪ್ಪಿಕೊಳ್ಳಲು, ಅವುಗಳ ಎಲುವುಗಳು ಕಟ-ಕಟೆಂದು ಶಬ್ದ ಮಾಡುತಿದ್ದುವು.

ಇದನ್ನೆಲ್ಲ ನೋಡಲು ಹರಿಶ್ಚಂದ್ರನಿಗೆ ಅವಕಾಶವಿರದು. ಅವನು ಒಡೆಯನ ಆಜ್ಞೆಯಂತೆ, ಅಲ್ಲಲ್ಲಿಯ ಶವಗಳ ಮೇಲಣ ವಸ್ತ್ರಗಳನ್ನು ಕೂಡಿಸಬೇಕಲ್ಲವೆ? ಆದುದರಿಂದ ಗಂಭೀರವಾಗಿ,—'ಸ್ಮಶಾನಕ್ಕೆ ಬಂದಿರು ವವರೆಲ್ಲರೂ ಕೇಳಬೇಕು,—ಇಲ್ಲಿಗೆ ಬಂದವರು ನನ್ನ ಪ್ರಭುವಿನ ಅಪ್ಪಣೆಯಂತೆ ಶವಗಳ ಹೊದಿಕೆಯನ್ನು ನನಗೆ ಕೊಡದೆ, ಅವನ್ನು ದಹಿಸಲು ಕೂಡದು!! ಇಲ್ಲಿ ಯಾರಿರುವರು? ಯಾರೊ ಅಲ್ಲಿ?' ಎಂದು ಕೂಗಿ ಹೇಳಿದನು.

ಪ್ರತಿಧ್ವನಿಯಾಯಿತು,—'ನಾನು, ನಾ ನಿ ರು ವೆ ನು.' ಇದಿರಿನಲ್ಲಿ ಕಾ ಪಾ ಲಿ ಕ ನಿ ದ್ದ ನು ! ಅವನು—'ನಾನು ನಿನ್ನಿಂದ ಭಿಕ್ಷೆ ಬೇಡಲು ಬಂದಿರುವೆನು' ಎಂದನು.

ಹರಿಶ್ಚಂದ್ರನು,—'ಸ್ಮಶಾನಚಂಡಾಲನ ದಾಸನು ಭಿಕ್ಷೆಕೊಡುವು ದೆಂದರೇನು?' ಎಂದು ಲಜ್ಜೆಯಿಂದ ತಲೆವಾಗಿ ನಿಂತನು.

ಕಾಪಾಲಿಕನು,—'ನಾಚಿಕೊಳ್ಳುವುದೇಕೆ? ಯೋಗಬಲದಿಂದ ನಿನ್ನ ವೃತ್ತಾಂತವೆಲ್ಲವು ನನಗೆ ತಿಳಿದಿರುವುದು. ಇಂದು ನಿನಗೆ ದುರ್ದಶೆ ಯುಂಟಾಗಿದೆಯಾದರೂ, ನನಗೆ ನಿನ್ನಿಂದಲೇ ಉಪಕಾರ ಉಂಟಾಗುವ ಸಂಭವವಿರುವುದು. ಅನೇಕ ಸಿದ್ಧಿಗಳನ್ನು ನಾನು ಪಡೆದಿರುವೆನು.

ಕೊನೆಗೆ ಪರಮಸಿದ್ಧಿರಸವನ್ನು ಪಡೆಯಲು ಇಲ್ಲಿಗೆ ಬಂದಿರುವೆನು. ಆದರೆ ವಿಘ್ನಗಳು ಬಾರದಂತೆ ಮಾತ್ರ ನೀನು ಜಾಗ್ರತೆಯಿಡಬೇಕು' ಎಂದನು.

ಹರಿಶ್ಚಂದ್ರನು ಆಗ,—'ವಿಘ್ನಗಳೆ, ದೂರವಾಗಿ!' ಎಂದು ಸಾರಿದನು. ಆಕಾಶದಲ್ಲಿ, 'ನಿನ್ನ ಆದೇಶವನ್ನು ಉಲ್ಲಂಘಿಸಲು ಯಾರಿಗೂ ಸಾಧ್ಯವಾಗಿಲ್ಲ' ಎನ್ನುತ್ತ, ವಿಘ್ನಗಳು ದೂರಗೊಂಡುವು. ಆಕಾಶದಲ್ಲಿ ಮಿಂಚು ಬೆಳಗಿತು. ಮೂರು ದೇವೀಮೂರ್ತಿಗಳು, ಹರಿಶ್ಚಂದ್ರನ ಇದಿರಿನಲ್ಲಿ ಕಾಣಿಸಿಕೊಂಡು, 'ಯಾರ ಸಲುವಾಗಿ ಕೌಶಿಕನಲ್ಲಿ ಸಿಟ್ಟೇರಿ ನಿನಗೆ ಇಂತಹ ದುರ್ದಶೆಯುಂಟಾಗಿರುವುದೊ, ಆ ತ್ರಿ-ವಿದ್ಯೆಗಳೇ ನಿನ್ನ ಇದಿರಿನಲ್ಲಿವೆ. ಮಹಾರಾಜನೆ, ನಾವು ಅಧೀನರಾಗಿರುವೆವು. ನಿನ್ನಪ್ಪಣೆಯಂತೆ ಮಾಡುವೆವು' ಎಂದು ವಿದ್ಯೆಗಳು ಬಿನ್ನವಿಸಿಕೊಂಡುವು.

ಹರಿಶ್ಚಂದ್ರನು ಅವರನ್ನು ನಮಸ್ಕರಿಸಿ,—'ನಿಮ್ಮ ಅನುಗ್ರಹಕ್ಕೆ ಇಂದು ನಾನು ಪಾತ್ರನಾಗಿರುವುದು ನಿಜವಾದರೆ, ನೀವು ಭಗವಾನ್ ಕೌಶಿಕನು ಇರುವಲ್ಲಿ ಹೋಗಿ, ನನ್ನನ್ನು ನಾನು ಗೆಯ್ದ ಅಪರಾಧದಿಂದ ವಿಮೋಚನಗೊಳಿಸಿರಿ!' ಎಂದು ಬೇಡಿಕೊಳ್ಳಲು; ವಿದ್ಯೆಗಳು, 'ತಥಾಸ್ತು' ಎನ್ನುತ್ತ ಅಲ್ಲಿಂದ ತೆರಳಿದುವು.

ಇದೇ ಸಮಯಕ್ಕೆ ಸರಿಯಾಗಿ ಕಾಪಾಲಿಕನೂ ಸಿದ್ಧಿರಸವನ್ನು ಪಡೆದವನಾಗಿ ಅಲ್ಲಿಗೆ ಬಂದು,–'ರಾಜನೆ, ಇದೊ ನಿನ್ನ ರಕ್ಷಣೆಯಿಂದ ಸಿದ್ಧಿ ರಸವನ್ನು ಪಡೆದನು. ಅದನ್ನು ನೀನು ಪರಿಗ್ರಹಿಸಿಕೊ' ಎನ್ನಲು, ಹರಿಶ್ಚಂದ್ರನು, 'ಇದು ನನ್ನ ದಾಸವ್ರತಕ್ಕೆ ವಿರೋಧವಾಗುವುದು. ಏಕೆಂದರೆ, ನನ್ನ ಒಡೆಯನು ಇದರಿಂದ ವಂಚಿತನಾಗುವನು' ಎಂದುತ್ತರವಿತ್ತನು.

ಕಾಪಾಲಿಕನು,—ನಿನ್ನ ಹಾಗೂ ನಿನ್ನ ಕುಟುಂಬದ ದಾಸತ್ವ ವಿಮೋಚನಕ್ಕೆ ಅಗತ್ಯವಾಗಿರುವ ಸಹಾಯ ದ್ರವ್ಯವಾಗಿಯಾದರೂ ಇದನ್ನು ತೆಗೆದುಕೊಳ್ಳೆನ್ನಲು, ಹರಿಶ್ಚಂದ್ರನು ಅದನ್ನೊಪ್ಪದೆ, 'ಮಹಾಶಯರೇ! ನಾನು ದಾಸನು; ನಾನು ಯಾವ ಧನಕ್ಕೂ ಅಧಿಕಾರಿಯಾಗಲಾರೆನು; ದಾಸನ ಧನವು ಯಾವುದೊ ಅದೇ ಪ್ರಭುವಿನ ಧನವು; ಕ್ಷಮೆಮಾಡುವಿರಾದರೆ ನನ್ನ ಪ್ರಭುವಿನ ಪರವಾಗಿ, ನಾನು ಇದನ್ನು ತೆಗೆದುಕೊಳ್ಳುವೆನು' ಎಂದನು.

ಏನು ಜ್ಞಾನವು! ಎಂತಹ ಧೈರ್ಯವು! ಎಂತಹ ಮಹಾನುಭವನೆ! ಯುಗಾಂತದ ಪ್ರಲಯಕಾಲದಲ್ಲಿ ದೊಡ್ಡ ದೊಡ್ಡ ವಿಂಧ್ಯಾಚಲಗಳೂ ವಿಚಲಿತವಾಗುವುವು; ಧೀರನ ಮನಸ್ಸು ಅಲುಗದು!— ಎಂದು ಕಾಪಾಲಿಕನು ಚಮುಕಿತನಾದನು ಹರಿಶ್ಚಂದ್ರನ ಈ ವಾಕ್ಯವನ್ನು ದೇವತೆಗಳು ನೆನೆವರೆಂದು ಭರವಸೆಯಿತ್ತು, ಕಾಪಾಲಿಕನು ಅಲ್ಲಿಂದ ತೆರಳಿದನು.

ಧರ್ಮನೇ ತಾನಾಗಿ ಕಾಪಾಲಿಕನಂತೆ ಅಲ್ಲಿಗೆ ಬಂದಿದ್ದು, ಹರಿಶ್ಚಂದ್ರನ ಧರ್ಮಬುದ್ಧಿಯು ಎಷ್ಟು ಗಂಭೀರವಾಗಿದೆಯೆಂದು ಮತ್ತೊಮ್ಮೆ ಪರೀಕ್ಷಿಸಿದವನಾಗಿ, ಸಂತೋಷಪಟ್ಟು, ಈಗ ಹಿಂತೆರಳಿದನು.

---

## ಐದನೆ ಅಂಕ

ಹೀಗಾಗಿ ಕೆಲವು ದಿನಗಳು ಕಳೆದುವು. ಹರಿಶ್ಚಂದ್ರನು ಅದೇ ಸ್ಮಶಾನದಲ್ಲಿರುತ್ತ, ತನ್ನ ಒಡೆಯನ ಅಪ್ಪಣೆಯಂತೆ ನಡೆದುಕೊಳ್ಳುತ್ತಿದ್ದನು. ವಿಕೃತವಾದ ಹುಲಿನ ವೇಷದಿಂದ ಕೂಡಿದ ಈ ಸ್ಮಶಾನಚಂಡಾಲನನ್ನು ಕಂಡರೆ, ಈತನೆ ಹರಿಶ್ಚಂದ್ರಮಹಾರಾಜನೆಂದು ಯಾರು ತಾನೆ ಈಗ ಹೇಳಲಾಪರು?

ಗಾಢಾಂಧಕಾರದ ರಾತ್ರಿ. ಮಡಿದ ರೋಹಿತಾಶ್ವನ ದೇಹವನ್ನು ಹೆಗಲಿನ ಮೇಲೆ ಹೊತ್ತು, ದುಃಖದಿಂದ ಅಳುತಳುತ, ಶೈಬ್ಯೆಯು ಆ ಮಹಾಸ್ಮಶಾನಕ್ಕೆ ಬಂದಳು. ಆ ಬಾಲಕನು ಉಪಾಧ್ಯಾಯರ ಬಗೆ ಹೂಗಳನ್ನು ಕೂಡಿಸುತಿದ್ದನು; ಮರದ ಪೊಟರೆಯೊಳಗಿಂದ ತೀವ್ರ ವಿಷವನ್ನುಳ್ಳ ಸರ್ಪವೊಂದು ಅವನನ್ನು ಕಡಿದುದರಿಂದ, ಅವನು ತನ್ನ ಪ್ರಾಣವನ್ನು ಕಳೆದುಕೊಂಡನು. ಪುತ್ರನ ಸತ್ಕಾರಕ್ಕಾಗಿ, ಶೈಬ್ಯೆಯು ಈಗ ಸ್ಮಶಾನಕ್ಕೆ ಬಂದಿರುವಳು. ಶವವನ್ನು ಅಲ್ಲಿ ಮಡಗಿ, ನಾನಾ ಪರಿಯಾಗಿ ಶೈಬ್ಯೆಯು ಹಂಬಲಿಸುತ್ತ, ಆಗಾಗ ಹುಚ್ಚಿಯಂತೆ ಪ್ರಲಾಪ ಮಾಡುತಿದ್ದು, ಕೊನೆಗೆ ಮೂರ್ಛೆಹೋದಳು.

ಶೈಬ್ಯೆಯು ಹೇಳುತಿದ್ದ ಮಾತುಗಳಿಂದ, ಅವಳು ತನ್ನ ಭಾಗ್ಯವನ್ನು ನಿಂದಿಸುತಿದ್ದುದರಿಂದ, ಅದೂರದಲ್ಲಿದ್ದ ರಾಜನಿಗೆ, ಮಗುವನ್ನು ಕಳೆದು

ಕೊಂಡಿದ್ದ ಈ ತಾಯಿಯು ಯಾರೆಂದು ಸ್ವಲ್ಪ ಸಮಯದೊಳಗೇ ತಿಳಿಯಿತು. ಹಾತೊರೆದು ಅವನೂ ಭೂತಲದಲ್ಲಿ ಬಿದ್ದುಕೊಂಡನು. ಆವನು ಅಳುತ್ತಿರುವಾಗ, ತಾನು ದಾಸನೆಂದೂ ತನ್ನ ಒಡೆಯನ ಅಪ್ಪಣೆಯನ್ನು ನೆರವೇರಿಸಬೇಕೆಂದೂ ಅವನ ಸ್ಮರಣೆಗೆ ಬಂತು. ತನ್ನ ಹೃದಯವನ್ನು ವಜ್ರವಾಗಿ ಮಾರ್ಪಡಿಸಿ, ಆವನು ಶೈಬ್ಯೆಯಿದ್ದಲ್ಲಿಗೆ ಹೋದನು.

ಅವಳು ಮೂರ್ಛೆ ತಿಳಿದೆದ್ದಳು. ಎದ್ದು ಕುಳಿತುಕೊಂಡಳು. ಅವಳ ಮನಸ್ಸಿನಲ್ಲಿಯೂ ತಾನು ದಾಸಿಯೆಂದು ಹೊಳೆಯಿತು. ಚೀ! ಮರಣದ ಮಾಯೆಗೆ ಮುಗ್ಧಿಯಾಗಿ, ತನ್ನ ದಾಸತ್ವವನ್ನೂ ಮರೆತನಲ್ಲ! ಇದು ಕಾರಣ, ಜನ್ಮಾಂತರದಲ್ಲೂ ತನಗೆ ದಾಸ್ಯವೃತ್ತಿಯೇ ಉಂಟಾಗುವುದಲ್ಲ! ದೇವತೆಗಳು ತನ್ನ ಸರ್ವನಾಶವನ್ನು ಸಾಧಿಸುತ್ತಿರುವರಲ್ಲ! ಇಂತಹ ದಶಾವಿಪರ್ಯಾಸವನ್ನು ಇನ್ನೂ ಕೆಲವು ದಿನಗಳ ವರೆಗೆ ತಾಳಿಕೊಳ್ಳಬೇಕು. ಈಗ ಕಾಲೋಚಿತವಾದುದನ್ನು ಮಾಡುವುದೇ ಶ್ರೇಯಸ್ಕರವು. ಅನಂತರ, ಬ್ರಾಹ್ಮಣನ ಸೇವೆಯಲ್ಲೂ ವ್ರತೋಪವಾಸಗಳಲ್ಲೂ ತನ್ನೀ ದೇಹವನ್ನು ಸವೆದುಕೊಳ್ಳುವೆನು. ಇನ್ನು ಈ ಮನುಷ್ಯಲೋಕದಲ್ಲಿ ತನಗೆ ಜನ್ಮ ದೊರೆಯದಂತೆ ಜಾಗ್ರತೆಮಾಡುವೆನು,—ಎಂದಿತ್ಯಾದಿಯಾಗಿ ಭಾವಿಸಿದಳು.

ಇಂತು ಬಗೆದು, ಶೈಬ್ಯೆಯು ಚಿತೆಯನ್ನು ಹೂಡಲು ಆರಂಭಮಾಡಿದಳು. ಆಗ ಹರಿಶ್ಚಂದ್ರನು,—'ದೇವಿಯೆ, ತಡೆ ತಡೆ; ಇಂತಹ ಅವಸ್ಥೆಯಲ್ಲೂ ನೀನು ನಿನ್ನ ಧರ್ಮವನ್ನು ಮರೆತಿಲ್ಲ. ನಾನೂ ನನ್ನ ಧರ್ಮದಂತೆ, ಒಡೆಯನ ಅಣತಿಯಂತೆ, ಮಾಡುವೆನು' ಎಂದು ಚಿಂತಿಸಿ;—'ಈ ಸ್ಮಶಾನದಲ್ಲಿ ನನಗೆ ತಿಳುಹದೆ, ಶವವಸ್ತ್ರವನ್ನು ನನಗೆ ಕೊಡದೆ, ಶವದಾಹವನ್ನು ಯಾರೂ ಮಾಡಲಾಗದು! ಅದು ಕಾರಣ, ಆ ಕಂಬಳಿಯನ್ನು ನನಗೆ ಕೊಡು!' ಎಂದು ಅವಳಿಗೆ ತಿಳುಹಿದನು.

ಶೈಬ್ಯೆಯು ಚಕಿತೆಯಾಗಿ, 'ಭದ್ರನೆ,—ತುಸು ದೂರದಲ್ಲಿರು. ಇತ್ತ ಬಾರದಿರು. ನಾನಾಗಿ ನಿನಗೆ ಕಂಬಳಿಯನ್ನು ತಂದುಕೊಡುವೆನು' ಎಂದುತ್ತರವಿತ್ತಳು. ಹಾಗೆಯೆ ಅವಳು ಆ ಕಂಬಳಿಯನ್ನು ಎತ್ತಿಕೊಂಡು ಕೊಡಲು ಮುಂದಕ್ಕೆ ಬಂದಳು; ಹರಿಶ್ಚಂದ್ರನೂ ಕೈಚಾಚಿದನು. ದೂರದಲ್ಲಿ ಉರಿಯುತಿದ್ದ ಚಿತೆಯ ಬೆಳಕು ಅವನ ಕೈಗಳ ಮೇಲೆ ಹರಿಯಿತು. ಶೈಬ್ಯೆಯು ಅವನ ಅಂಗೈಯನ್ನು ಕಂಡು, ವಿಸ್ಮಿತೆಯಾಗಿ—'ಅಹ! ಯಾವ

ಅಂಗೈಯ ಮೇಲೆ ಚಕ್ರವರ್ತಿಸೂಚಕವಾದ ಲಕ್ಷಣಗಳಿವೆಯೊ, ಅದುವೆ ಇಂದೀ ಹೀನಕಾರ್ಯಕ್ಕೆ ಸೀಡಿಕೊಂಡಿರುವುದೆ?—ಇದಾರು?-ನ-ನ್ನ ನಾ- ನಾಥನೆ! ಹಾ-ಕ್ಷಮೆಯಿರಲಿ,—ಕಾಪಾಡು,' ಎಂದು ಬಿಕ್ಕುತ್ತ ಅತ್ತಳು.

ಆ ಮೇಲೆ, ಅವಳು ಉನ್ಮಾದಿನಿಯಂತೆ ರಭಸದಿಂದ ಓಡಿ, ಅವನ ಪಾದತಲದಲ್ಲಿ ಬಿದ್ದು ಹೊರಳಿದಳು. ಹರಿಶ್ಚಂದ್ರನು ಹಿಂದಕ್ಕೆ ಸರಿದು.— 'ದೇವಿಯೆ, ನಾನು ಚಂಡಾಲನು! ನನ್ನನ್ನು ಮುಟ್ಟದಿರು!' ಎಂದನು.

ಶೈಬ್ಯೆಯು ಎದ್ದಳು. ಚೇತರಿಸಿಕೊಂಡಳು. ಗೋಳಾಡಿದಳು. ಅವಳ ಚೀತ್ಕಾರವೇ ಚೀತ್ಕಾರ!

'ಇದು ಸ್ವಕರ್ಮದ ಪರಿಣಾಮವು! ದುಃಖದಿಂದ ಇನ್ನು ಫಲವಿಲ್ಲ. ಆದನ್ನು (ಕಂಬಳಿಯನ್ನು) ಇತ್ತಕೊಡು' ಎಂದು ರಾಜನೆನ್ನಲು, ಅವಳು ಕಂಬಳಿಯನ್ನು ಅತ್ತ ಬೀಸಾಡಿದಳು.

ಆಕಾಶದಲ್ಲಿ, ಆಗ ತಾನೆ,—ಹೂಮಳೆಗರೆದಿತು! 'ಧೀಮಂತನಾದ ಹರಿಶ್ಚಂದ್ರನ ಕ್ಷಮೆ, ಧೈರ್ಯ, ದಾನ, ಶೀಲ, ಸತ್ಯ, ಜ್ಞಾನ,— ಇವೆಲ್ಲವೂ ಎಷ್ಟೋ ಮಹತ್ತಾಗಿವೆ!!!' ಎಂದೂ ಧ್ವನಿ ಕೇಳಿಸಿತು!

ಶೈಬ್ಯೆಯು ಈ ದೇವವಾಣಿಯನ್ನು ಕೇಳಿ,—'ಆರ್ಯಪುತ್ರನ ಗುಣ ಕಥನಮಾಡುತ್ತ ಯಾರದು ನನ್ನ ಹೃದಯವನ್ನು ತೋಷಗೊಳಿಸಿದವರು? ಈ ಗುಣಕೀರ್ತನೆಯು ವ್ಯರ್ಥವು! ಆರ್ಯಪುತ್ರನ ದಶೆಯೀ ಇಷ್ಟಾದ ಮೇಲೆ, ಧರ್ಮದಿಂದ ಉಪಕಾರವೇನು? ಎಲ್ಲವೂ,—ಕಾಡಿನಲ್ಲಿ ಅತ್ತು ಕೊಂಡಂತೆ!' ವಿಜ್ಞಾನವೆಲ್ಲವೂ,—ಕತ್ತಲಲ್ಲಿ ಕುಣಿದಂತೆ!!' ಎಂದು ಸಿಟ್ಟು ಸಿರಿಟ್ಟಳು.

ಆಗ,—ಧರ್ಮದೇವನು ಅಲ್ಲಿ ಪ್ರತ್ಯಕ್ಷನಾಗಿ,—'ಮಹಾ ಪತಿವ್ರತೆ ಯಾಗಿರುವ ಶೈಬ್ಯೆಯೆ! ಮಹಾರಾಜನಾಗಿರುವ ಹರಿಶ್ಚಂದ್ರನೆ! ನಾನು ಪ್ರಯೋಜನಕ್ಕೆ ಬಾರದವನೆ? ಸತ್ಯದಿಂದ, ಜ್ಞಾನದಿಂದ ಅಥವಾ ಯಜ್ಞ ಕಾರ್ಯಾದಿಗಳಿಂದ ಮಿಕ್ಕ ಅರಸರುಗಳಿಗೆ ದುರ್ಲಭವಾಗಿರುವ ಶಾಶ್ವತ ಬ್ರಹ್ಮಲೋಕದಲ್ಲಿ ನಿಮಗೆ ಪದವನ್ನು ಸ್ಥಿರಗೊಳಿಸಿರುವೆನೆಂದು ತಿಳುಹಲು ನಾನೇ ಇಲ್ಲಿಗೆ ತಾನಾಗಿ ಬಂದಿರುವೆನು. ಇನ್ನು ದುಃಖವೇಕೆ?— ವತ್ಸನಾದ ರೋಹಿತಾಶ್ವನೆ! ಎದ್ದೇಳು!! ನಿನ್ನ ತಂದೆಯು ಧರ್ಮವ

ಸುರಕ್ಷಿತವಾಗಿಯೇ ಇದೆ! ಮರಳಿ ಜೀವಿತನಾಗಿ ಬಹುಕಾಲದ ವರೆಗೆ ಪ್ರಜೆಗಳನ್ನು ಪಾಲಿಸುತ ಬಾಳು!' ಎಂದು ಹರಸಿದನು.

ರೋಹಿತಾಶ್ವನು ನಿದ್ರೆತಿಳಿದು ಎಚ್ಚರಗೊಂಡವನಂತೆ ಉಪ್ಪವಡಿಸಿದನು. ಅವನೆಲ್ಲರಿಗೂ ಸಾಷ್ಟಾಂಗವೆರಗಿದನು.

ಧರ್ಮದೇವನು ಹರಿಶ್ಚಂದ್ರನಿಗೆ ದಿವ್ಯದೃಷ್ಟಿಯನ್ನಿತ್ತನು. ತ್ರಿ-ವಿದ್ಯೆಗಳನ್ನೂ ಪಡೆದ ವಿಶ್ವಾಮಿತ್ರನು ಹರಿಶ್ಚಂದ್ರನ ರಾಜ್ಯವನ್ನು ಅವನ ಮಂತ್ರಿಯ ಕೈಗೆ ಒಪ್ಪಿಸಿರುವನೆಂದೂ, ಹರಿಶ್ಚಂದ್ರನನ್ನು ಕ್ರಯಕ್ಕೆ ಕೊಂಡಿದ್ದ ಆ ಚಂಡಾಲನೇ ಧರ್ಮದೇವನೆಂದೂ, ಶೈಬ್ಯೆಯು ಯಾರಲ್ಲಿ ದಾಸಿಯಾಗಿದ್ದಳೊ ಅವರೆ ಹರಪಾರ್ವತಿಯರೆಂದೂ, ಆಗ ತಾನೆ ಅವನಿಗೆ ಗೋಚರವಾಯಿತು.

ಆ ಸ್ಮಶಾನದಲ್ಲೆ, ಧರ್ಮದೇವನು ರೋಹಿತಾಶ್ವನಿಗೆ ಪಟ್ಟಗಟ್ಟಿದನು. ಹರಿಶ್ಚಂದ್ರನಿಗೆ ಬ್ರಹ್ಮಲೋಕದಲ್ಲಿ ತನ್ನ ಪದವಿಗೇರಲು ಅಪ್ಪಣೆಯಾಯಿತು.

'ಭಗವಂತನೆ! ಅಂದು ಅಯೋಧ್ಯೆಯನ್ನು ಬಿಟ್ಟು ಬರುತಿದ್ದಾಗ, ನನ್ನಲ್ಲಿ ಭಕ್ತಿಯಿಂದ, ನನ್ನೊಡನೆ ತಾವೂ ಬರುವೆವೆಂದು ಬೇಡಿ ಅಳುತಲಿದ್ದ ಆ ಪ್ರಜೆಗಳನ್ನು ಇಂದು ಮರೆತು, ನಾನು ಸ್ವಾರ್ಥದಿಂದ, ಹೇಗೆ ತಾನೆ ಒಬ್ಬಂಟಿಗನಾಗಿ ಬ್ರಹ್ಮಲೋಕವನ್ನು ಸೇರಲಿ?' ಎಂದು ಹರಿಶ್ಚಂದ್ರನೆಂದನು.

ಧರ್ಮ:—ಪ್ರಜೆಗಳು ತಮ್ಮ ತಮ್ಮ ಕರ್ಮಫಲಕ್ಕೆ ಸರಿಯಾಗಿ ಬಗೆಬಗೆಯ ಸ್ವಭಾವವನ್ನುಳ್ಳವರು. ಅವರೇನು ಬ್ರಹ್ಮಲೋಕವನ್ನು ಸೇರಲು ಯೋಗ್ಯರೆ?

ರಾಜನು:— ಅವರೆಲ್ಲರೊಡನೆ ಕೊಂಚಕಾಲದ ವರೆಗೆ ನಾನು ಇರುವೆನು. ನನ್ನ ಸಂಚಿತಪುಣ್ಯದ ಅಂಶಗಳನ್ನು ಅವರಿಗೆ ಕೊಟ್ಟು, ಅವರೂ ಒಂದು ಲೋಕವನ್ನು ಸಂಪಾದಿಸಿಕೊಳ್ಳುವಂತೆ ಮಾಡುವೆನು! ಅವರಿಗೆ ಆಗ ಯಾವ ಲೋಕವು ಪ್ರಾಪ್ತವಾಗುವುದೊ, ಅದೇ ಲೋಕವು ನನಗೂ ಪ್ರಾಪ್ತವಾಗಲಿ!

ಧರ್ಮ:— ಈ ಬಗೆಯು ನಿನ್ನ ಆಸೆಯಿಂದ ನೀನು ಮತ್ತಷ್ಟು ಪುಣ್ಯವನ್ನು ಗಳಿಸಿಕೊಂಡೆ! ಇದರ ಫಲವಾಗಿ, ನಿನ್ನೊಡನೆ ನಿನ್ನಂತೆಯೇ ಪ್ರಜೆಗಳಿಗೆಲ್ಲ ಬ್ರಹ್ಮಲೋಕವು ಪ್ರಾಪ್ತವಾಗುವುದಾಗಲಿ !!

ಇಂತೆಂದು ಆಶೀರ್ವದಿಸಿ, ಧರ್ಮರಾಜನು ತನ್ನ ಲೋಕಕ್ಕೆ ಮರಳಿದನು.

— ಸಂಪೂರ್ಣ —

# ಮಕ್ಕಳ ಕಥೆಗಳು

ಅರ್ಗಣೆ ಮುದ್ದೆ
ಗಾಳಿಯ ಕೋಳಿ, ಪುಕ್ಕದ ಕಪ್ಪು
*ಬಿಟ್ಟೀ ಬಸವಯ್ಯ
*ಅಂಗಳದುಗ್ಗ
ಜೋಡು ನಕ್ಷತ್ರ
ಕೊ ಕ್ಕೊ ಕ್ಕೋ ಕೋಳಿ
*ಮೆಣಸಿನ ಕಾಳಪ್ಪ
ಮೂರು ಕರಡಿಗಳು
*ಸಿಗಡಿ ಯಾಕೆ ಒಣಗಲಿಲ್ಲ?
*ಗುಡುಗುಡು ಗುಮ್ಮಟ ದೇವರು
ಒಡ್ಡನ ಓಟ
ಗೋವಿಂದಾ! ಗೋವಿಂದಾ!
ಬೆಕ್ಕಿನ ಬಿಡಾರ ಬೇರೆ
*ಇಲಿಗಳ ಗಕ್ಕಥೈ
*ಹೇನು ಸತ್ತು ಕಾಗೆ ಬಡವಾಯಿತು
ಮಾತಾಡೋ ರಾಮಪ್ಪ
ಗೋಣಿತಟ್ಟಿನ ಪಟ್ಟೆಹುಲಿ
ಒಂದನೆ ಎರಡನೆ ದರ್ಜೆಗಳ ೧, ೨, ೩
ಭಾಗಗಳಿಗೆ ಪ್ರತಿಯೊಂದಕ್ಕೆ
ಗಿರ್‌ರೋಂಜ್ ಕಾ ಖಲೀಫ್
ಬೊಕ್ಕೆ ಬಾಯಿ ಕೊಕ್ಕ ರಾಜ
*ತಟಪಟ ಹನಿಯಪ್ಪ
ಮೂರನೆಯ ದರ್ಜೆಯ ಕಥೆಗಳು
*ಅರಬಸ್ಥಾನ
*ಚೀನ
ಡಂ ಡಂ ಡೋಲು
ಸಿಂದಬಾದ ನಾವಿಕ
ಅಲ್ಲಾವುದ್ದೀನನ ವಿಚಿತ್ರ ದೀಪ
ಹುಲಿರಾಯ

ಇತರ ಪುಸ್ತಕಗಳು

ಹೊಸ ಕನ್ನಡ ಪುಸ್ತಕ ೧ನೇ ಭಾಗ
,, ೨ನೇ ಭಾಗ
*ಅಜ್ಜಿ ಸಾಕಿದ ಮಗು
*ಅಗೋಳಿ ಮಂಜಣ
ಕಾಣಿಕೆ

ಮಂಥರೆಯ ಮಾಟ
ಶಶಿಕಾಂತನ ವೀಲು
ಚಂಡಕೌಶಿಕ
ಬಾರಕೂರಿನ ಗತ ವೈಭವ
ಕೃಷ್ಣ ಸಂಧಾನ
ಐದನೆ ದರ್ಜೆಯ ಚರಿತ್ರೆ ಮತ್ತು ಕಥೆಗಳು
ಅಜಿತ ಕುಮಾರ
ಚಾಣಕ್ಯತಂತ್ರ ಭಾಗ ೧
ಸಮಾಜ ದ್ರೋಹಿ
ಕೋಟಿಚೆನ್ನಯ
ರಮಾ ಮಾಧವ
ಸೀತಾರಾಮ
ಯಾದವ ಕೃಷ್ಣ
ಭೀಷ್ಮನ ಕಥೆ
ಕಾವ್ಯರತ್ನಾಕರ
ಪದ್ಯ ಕಥಾವಳಿ—I ಭಾಗ
ಹಾವು
ಹಸಿವು
ಕಲಿಯುಗದ ಭೀಷ್ಮ
ಹಿಡಿಂಬೆ
ಚಾಣಕ್ಯತಂತ್ರ ಭಾಗ ೨
ಪದ್ಯಸಂಗ್ರಹ
ಪದ್ಯ ಕಥಾವಳಿ—II ಭಾಗ
ಹಳ್ಳಿಯ ರಾಣಿ

ಇತರ ಪುಸ್ತಕಗಳು

ನಾಟಕ ಕಲೆ
ಸುಭದ್ರಾ ವಿಜಯ ನಾಟಕಂ
ಕೃಷ್ಣಾ ಕುಮಾರಿ
ಶೂದ್ರಕ
ಯಜ್ಞಕುಂಡ
ತಿಕ್ಷಣ
ವಿಧಿಯ ವೈಚಿತ್ರ್ಯ
ಶ್ರೀ ಕೃಷ್ಣ ಚರಿತಾಮೃತ
ಚಾಣಕ್ಯತಂತ್ರ (ಇಡೀ)

---

*ಇವು ಸಚಿತ್ರ ಪುಸ್ತಕಗಳು